

# ಸಿದ್ಧಗಂಗಾ



ಜೂನ್-೧೯೯೯




ಮೇ ೧೭ರಂದು ನೆಲಮಂಗಲ ತಾಲ್ಲೂಕು ಪ್ರಥಮ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟಿಸಿದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಗ್ರಾಮೀಣಾಭಿವೃದ್ಧಿ ಮತ್ತು ವಾರ್ತಾ ಸಚಿವರಾದ ಶ್ರೀ ಎಂ.ಪಿ. ಪ್ರಕಾಶ್, ವೈದ್ಯಕೀಯ ಶಿಕ್ಷಣ ಸಚಿವರಾದ ಡಾ. ಎಂ. ಶಂಕರ್ ನಾಯಕ್ ಮೊದಲಾದ ಗಣ್ಯರನ್ನು ಕಾಣಬಹುದು.

**ಪ್ರಕಾಶಕರು**
**ಹೆಚ್.ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
**ಮುದ್ರಕರು :**
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭

ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೫    ಜೂನ್ ೧೯೯೯    ಸಂಚಿಕೆ : ೬

## ಒಳಪುಟಗಳಲ್ಲಿ ......



**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

## ಸ್ಮಶಾನವೂ ಹಿಂಜರಿವಂತ ದುರ್ಘಟನೆ.....

ಆತ್ಮೀಯರೆ,

ತೊಂಬತ್ತಾರು ಸಾವು. ಜಲಸಮಾಧಿಯಿಂದ ಹೊರಗೆಳೆದು ತಂದ ನೋವು. ಕರುಳು ಕಿತ್ತು ಬರುವಂತಹ ದೃಶ್ಯ. ದೂರದರ್ಶನ ಬಿತ್ತರಿಸಿದ ಚಿತ್ರ. ಪತ್ರಿಕೆಗಳು ನೀಡಿದ ವಿವರಗಳು. ಈ ಶತಮಾನದ ಕೊನೆಯಲ್ಲಿ ಕಮರಿಹೋದ ಮೊಗ್ಗುಗಳು. ಅರಳುವ ಮೊದಲೇ ಉದುರಿಹೋದ ಹೃದಯ ವಿದ್ರಾವಕ ದುರಂತ ನಮ್ಮ ವ್ಯವಸ್ಥೆಗೆ ಹಿಡಿದ ಮರಣಗನ್ನಡಿ.

ದೇವರ ಬೆಳಿಕೆರೆ ಬಳಿಯ ಜಲಾಶಯ ನಾಡಿನ ಮನೆ ಮಾತು; ಕಣ್ಣೀರಿನ ಕಾಲುವೆ ತೋಡಿದ ಕೆಟ್ಟ ಘಟನೆ. ಸಾವು ಬರದಿರುವ ಜೀವವಿಲ್ಲ; ಆದರೆ ಈ ತೆರೆದ ಸಾವು ಬರುವುದು ಎಂಥ ವಿಚಿತ್ರ!

ಬಸ್ಸಿನ ಚಾಲಕ ಜಿಗಿದು ಪಾರಾದ ಸುದ್ದಿ ಬಸ್ಸಿನೊಳಗಿದ್ದ, ಮೇಲಿದ್ದ ದುರ್ದೈವಿಗಳೆಲ್ಲ ನೀರು ಕಂಡರು. ಕರುಳ ಕುಡಿಗಳನ್ನು, ರಕ್ತ ಸಂಬಂಧಿಗಳನ್ನು, ಕಳೆದುಕೊಂಡವರ ಗೋಳು ಕಂಡವರು, ಕೇಳಿದವರು ಮಮ್ಮಲಮರುಗಿದರು. ಸಾಹಸಿಗಳು, ಮಾನವೀಯತೆಯುಳ್ಳವರು ನೀರಿಗಿಳಿದು ಬಸ್ಸಿನಡಿಯಲ್ಲಿ ಸಿಕ್ಕಿದ್ದ ಜೀವಿಗಳನ್ನು, ಹೆಣಗಳನ್ನು ಮೇಲೆತ್ತಿದರು. ಅವುಗಳನ್ನು ನೋಡಿದವರ ಉಸಿರೇ ನಿಂತು ಹೋಗುವಂಥ ಸ್ಮಶಾನವೂ ಹಿಂಜರಿವಂಥ ದುರ್ಘಟನೆ.

ಜನಪ್ರತಿನಿಧಿಗಳು, ಶಾಸಕರು, ಸಚಿವರು, ಮುಖ್ಯಮಂತ್ರಿಗಳು, ಪ್ರಧಾನಿಗಳು ಸಂತಾಪ ಸಾಂತ್ವನ ಮಾಡಿದರು. ರಾಜ್ಯಕ್ಕೆ ರಾಜ್ಯವೇ ಕಣ್ಣೀರು ಹಾಕಿತು. ತನ್ನ ವಿದ್ಯಾರ್ಥಿಗಳ ಸಾವು ಕಂಡ ಪ್ರಿನ್ಸಿಪಾಲ್ ಶ್ರೀ ಜಯದೇವಪ್ಪನವರು ಗೋಳೋ ಎಂದು ಅತ್ತರು, ಆಗಬಾರದ ಘಟನೆ. ಆದರೆ ಬಸ್ಸಿನ ಪ್ರಯಾಣದ ಇಂಥ ದುರ್ಘಟನೆಗಳು ನಡೆಯುತ್ತಲೇ ಇದ್ದರೂ ವ್ಯವಸ್ಥೆಗೆ ಸಂಬಂಧಿಸಿದವರು ಎಚ್ಚರವಹಿಸಬೇಕಾದ ನಿದರ್ಶನಗಳಿವಲ್ಲವೆ? ಯಾರೇ ಏನು ಹೇಳಿದರೂ, ಘಟನೆ ನಡೆದ ಕೆಲವು ದಿನ ಅದೇ ಚಿಂತೆಯಲ್ಲುಳಿದರೂ, ಕಾಲಾನಂತರದಲ್ಲಿ ಎಲ್ಲವೂ ಮರೆತು ಹೋಗುವುದಲ್ಲವೇ? Public memory is very poor ಎನ್ನುತ್ತಾರಲ್ಲವೆ? ಯಾರೇನು ಮಾಡಲು ಸಾಧ್ಯ; ಅವರ ಅಂತ್ಯ ಅಲ್ಲಿತ್ತು ಎನ್ನುವವರೂ ಇರುತ್ತಾರಲ್ಲವೆ? ಹಾಗೆಂದುಕೊಂಡು ಕೈಕಟ್ಟಿ ಕುಳಿತುಕೊಳ್ಳುವುದೆ? ಬಸ್ಸುಗಳ ಟಾಪಿನ ಮೇಲೆ ಪ್ರಯಾಣಿಸಬಾರದು, ಪ್ರಯಾಣಿಸಿದವರಿಗೆ ಶಿಕ್ಷೆ, ಹಾಗೆ ಪ್ರಯಾಣಿಸಲು ಸಹಕರಿಸಿದ ಬಸ್ಸಿನ ಚಾಲಕ, ನಿರ್ವಾಹಕರಿಗೆ ಜೈಲುಶಿಕ್ಷೆ, ಅನುಮತಿಸಿದ ಸಂಬಂಧಿಸಿದ ಸಾರಿಗೆ ಇಲಾಖೆಯವರಿಗೆ ಎಚ್ಚರಿಕೆ ನೀಡಬೇಕಾದ ಆವಶ್ಯಕತೆಯಿದೆಯಲ್ಲವೆ? ಹಾಗೆಂದು ನೀತಿ ನಿಯಮಗಳೂ ರೂಪಿತವಾಗಿವೆ ತಾನೆ? ಆದರೆ ಅವುಗಳು ಕೇವಲ ಅಕ್ಷರ ರೂಪದಲ್ಲಿ ಉಳಿದರೆ ಬಂದುದೇನು? ಇತ್ತ ಸರ್ಕಾರ, ಜನತೆ ಜಾಗೃತವಾಗಬೇಕೆಂದು 'ಸಿದ್ಧಗಂಗಾ' ಆಶಿಸುತ್ತದೆ.

ಅಸುನೀಗಿದ ಎಲ್ಲ ದುರ್ದೈವಿಗಳಿಗೆ ಅಶ್ರುತರ್ಪಣವನ್ನು ನೀಡುತ್ತದೆ 'ಸಿದ್ಧಗಂಗಾ'.

**ಹೆಚ್.ವಿ. ವೀರಭದ್ರಯ್ಯ**
ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸ್ವಯ ಜಂಗಮವಾದೆ ಚರಜಂಗಮವಾದೆ
ಪರಜಂಗಮವಾದೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ವಿಜ್ಞಾನವ ನೀ ಬಲ್ಲೆ ತತ್ವ ಜ್ಞಾನವ ಬಲ್ಲೆ
ಆತ್ಮಜ್ಞಾನವ ಬಲ್ಲೆ ನನ್ನ ತಂದೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಆದಿ ಆಧಾರಗಳು ಹಮ್ಮು ಬಿಮ್ಮುಗಳು ತಾ
ನಾದ ಬಿಂದುಗಳು ಇರದಂದು । ನಗುತಿರ್ದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಓದು ವೇದಗಳು ಯುಗಗಳು ಜಾಗಗಳು
ವಾದಭೇದಗಳು ಇರದಂದು । ನಗುತಿರ್ದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಾಯಲಿಂಗಾರ್ಪಿತ ಜೀವಲಿಂಗಾರ್ಪಿತ
ಕರಣ ಲಿಂಗಾರ್ಪಿತ ಮಾಡಿರುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಸುರತರುವೆನಿಸಿದೆ ಸುರಧೇನುವೆನಿಸದೆ
ಗುರುವೆ ಪರಮೇಶ್ವರನೆ ನಿರಂಜನನೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹಣೆಯೊಳು ಶಿವಭಸ್ಮ ಕೊರಳೊಳು ರುದ್ರಾಕ್ಷಿ
ಶಿವತನುವಿಗೆ ಚೆಂಗಾವಿ ಮುಡಿಸಿರುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ನೀನಲ್ಲದೆ ನನಗೆ ದೈವ ಬೇರೆ ಇಲ್ಲ
ನೀನಲ್ಲದೆ ನನಗೆ ಗುರುವಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅಂಗಕ್ಕಾಚಾರವಾಚಾರಕ್ಕೆ ಪ್ರಾಣವ
ಪ್ರಾಣಕ್ಕೆ ಜ್ಞಾನವಾಶ್ರಯವ । ಮಾಡಿದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಜ್ಞಾನಕ್ಕೆ ಲಿಂಗವ ಲಿಂಗಕ್ಕೆ ಜಂಗಮವ
ಲಿಂಗಜಂಗಮಕ್ಕೆ ಎಲ್ಲವ । ನೀಡಿದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

### ಜೀವನದೃಷ್ಟಿ

ಇಂದು ರಾಷ್ಟ್ರ ಜೀವನ ಭ್ರಷ್ಟಗೊಂಡಿದೆ. ಎಲ್ಲೆಲ್ಲೂ, ಎಲ್ಲ ಹಂತದಲ್ಲೂ ನೈತಿಕ ದಿವಾಳಿ ನಡೆದಿದೆ. ಸೋಮಾರಿತನ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಜನತೆ ತಮ್ಮ ಶಕ್ತಿಯ ಸದುಪಯೋಗ ಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡುತ್ತಿಲ್ಲ. ಶ್ರಮ ಯಾರಿಗೂ ಬೇಕಾಗಿಲ್ಲ; ಸುಖ ಎಲ್ಲರಿಗೂ ಬೇಕಾಗಿದೆ. ದುಡಿದು ತಿನ್ನಬೇಕೆಂಬ ದೃಢನಿಷ್ಠೆಯಿಲ್ಲ. ಸದಾ ಅನಾಯಾಸವಾಗಿ ಸಂಪತ್ತನ್ನು ದೋಚಿಕೊಳ್ಳುವ, ಬಾಚಿಕೊಳ್ಳುವ ಮಾರ್ಗವನ್ನೇ ಹುಡುಕಿಕೊಳ್ಳುವ ಹೀನ ಜೀವನ ದೃಷ್ಟಿ ಬೆಳೆದು ನಿಂತಿದೆ. ಮುಖಂಡರು ಆದರ್ಶ ಪರಂಪರೆಯ ವಾರಸುದಾರರಾಗುತ್ತಿಲ್ಲ. ಸ್ವಾರ್ಥದ ಸಂತೆಯಲ್ಲಿ ಬಾಚಿಕೊಂಡದ್ದೇ ತನ್ನದು ಎಂಬ ದೃಷ್ಟಿಯವರಾಗುತ್ತಿದ್ದಾರೆ. ದೇಶವನ್ನು ಋಣಭಾರದಿಂದ ತತ್ತರಿಸುವಂತೆ ಮಾಡಿದ್ದಾರೆ. ಅನ್ಯ ರಾಷ್ಟ್ರಗಳಿಂದ ತಂದಿರುವ ಸಾಲಕ್ಕೆ ಬಡ್ಡಿ ಕಟ್ಟುವ ಶಕ್ತಿಯೂ ಇಲ್ಲದಂತೆ ಮಾಡಿರುವುದೊಂದೆ ಮಾಡಿರುವ ಐವತ್ತು ವರ್ಷಗಳ ಸಾಧನೆಯಾಗಿದೆ. ಸಾವಿರ ಸಾವಿರ ಕೋಟಿ ರೂ.ಗಳ ಬಡ್ಡಿಯನ್ನು ತೆರಬೇಕಾದ ದುಸ್ಥಿತಿಗೆ ದೇಶವನ್ನು ತಂದು ನಿಲ್ಲಿಸಿದ್ದಾರೆ. ಶ್ರಮವೊಂದೇ, ಕಾಯಕ ಸದ್ಭಾವನೆಯೊಂದೇ ದೇಶಕಟ್ಟುವ ಮಣಿಹವೆಂಬುದನ್ನೇ ಮರೆತಿದ್ದಾರೆ. ದುಡಿದು ತಿನ್ನುವುದು ಪ್ರಸಾದವಾಗುತ್ತದೆ; ಪದಾರ್ಥವೆನಿಸುವುದಿಲ್ಲ. ದುಡಿಯದೆ, ಮೈಗಳ್ಳತನದಿಂದ, ಸೋಮಾರಿಗಳಾಗಿ ಊಟ ಮಾಡುವುದು ಕೂಳಾಗುತ್ತದೆ; ಪ್ರಸಾದವಾಗುವುದಿಲ್ಲ. ಇಂದು ಎತ್ತೆತ್ತ ನೋಡಿದರೂ ಕೂಳುಬಾಕರೇ ವಿಜೃಂಭಿಸಿದ್ದಾರೆ; ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ಕಾಯಕಮಾಡದೆ ತಿನ್ನುವುದು ಕೂಳು; ಶ್ರಮ ಜೀವನ ನಡೆಸಿ ಊಟಮಾಡುವುದು ಪ್ರಸಾದ. ●



## ಶ್ರೀ ಸಿದ್ಧಲಿಂಗೇಶ್ವರ ವಚನ

ಅಂಗಭಂಗವ ಲಿಂಗಸಂಗದಿಂದ ಪರಿಹರಿಸಬೇಕಯ್ಯಾ,
ಮನೋಮಾಯವ ಅರುಹಿನ ಬಲದಿಂದ
ಪರಿಹರಿಸಬೇಕಯ್ಯಾ
ಜೀವನೋಪಾಧಿಯ ಶಿವಾನುಭವದಿಂದ ಹರಿಯಬೇಕು
ಕಾಣಿರೋ
ಕರಣದ ಕತ್ತಲೆಯ ಸದಮಳದ ಬೆಳಗನುಟ್ಟು
ಪರಿಹರಿಸಬೇಕು ಕಾಣಿರೋ
ಜವ್ವನದ ಹೊರಮಿಂಚ, ಕಣ್ಣಿಗೆ ತೋರುವ ಕಾಮಜಾಲಂಗಳ
ಶಿವಜ್ಞಾನಾಗ್ನಿಯನಿಕ್ಕಿ ಸುಟ್ಟುರುಹಿಭಸ್ಮವ ಧರಿಸಬಲ್ಲರೆ
ಶರಣರೆಂಬೆನು
ಉಳಿದವೆಲ್ಲಾ ಹುಸಿಯೆಂಬೆ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಶರೀರದ ಅವಗುಣಗಳನ್ನು ಲಿಂಗಸಂಗದಿಂದಲೂ, ಮನದ ಮಾಯೆಯನ್ನು ಶಿವಜ್ಞಾನದ ಬಲದಿಂದಲೂ, ಜೀವನೋಪಾದಿಯನ್ನು ಶಿವಾನುಭವದಿಂದದಲೂ ಪರಿಹರಿಸಲೇಬೇಕು. ಇಂದ್ರಿಯಗಳನ್ನು ಮುಸುಕಿದ ಅಜ್ಞಾನ ಕತ್ತಲೆಯನ್ನು ನಿರ್ಮಲವಾದ ಶಿವಜ್ಞಾನದ ಬೆಳಕನ್ನುಟ್ಟುಕೊಂಡು ಪರಿಹರಿಸಿಕೊಳ್ಳಬೇಕು. ಯಾವನು ಯವ್ವನದಲ್ಲಿ ಕಾಡುವ ಕಾಮಾದಿಗಳನ್ನು ಶಿವಜ್ಞಾನವೆಂಬ ಬೆಂಕಿಯಲ್ಲಿ ಸುಟ್ಟು ಬೂದಿಮಾಡಿ ಧರಿಸುವನೋ ಅವನೇ ಶಿವಶರಣ ನಾಗಬಲ್ಲನು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ.
ಸೇ. ಸಂಘ, ಎಡೆಯೂರು-ಗದಗ)

## ಸಿದ್ಧಶಕ್ತಿ



ಸಿದ್ಧರ ಪ್ರದೇಶದಲಿ ವೃದ್ಧಿಯಾಯಿತು ಜಗವು
ಸಮೃದ್ಧಗೊಳ್ಳಲೀ ಬದುಕ ಭಾಗ್ಯ
ಮನಮನದ ನಡುವೆ ಇರುವ ಕಪ್ಪು ಗೋಡೆ ಕುಸಿದು
ಪೂರ್ವವು ಅಪೂರ್ವತೆಯ ಪಡೆಯಲಿನ್ನೊಮ್ಮೆ

ಕಿವಿ ಆನಿರ್ವಚನೀಯ ನಾದಲಿಖಿತ
ಆಕಸ್ಮಿಕಕೆ ತೆತ್ತು ಕೊಳಲು
ಹಾಲಕ್ಕಿ ಕೊರಳೆತ್ತಿ ನಡುಬೆಳಗು ಜಾವ
ಬೆಳ್ದಿಂಗಳಿನ ಜೀವ ಭೂಮಿ ಬಯಲು

ನಂಬುಗೆಯ ಮೀರಿದ ಕುತೂಹಲಾವಿಷ್ಟತೆ
ಜಡಿಮಳೆಯ ಹಾಗೆ ಇಳೆ ಸುರಿಯುತಿರಲು
ಒಂಚೂರು ಹೆಚ್ಚು ಕಮ್ಮಿಯಾಗದ ಹಾಗೆ
ಸೂಲಿಸುತ್ತಿದೆ ಸೃಷ್ಟಿ ಒಳಗೆ ಹೊರಗೆ

ಸೂರ್ಯ ತಲೆ ಮೇಲಾಡಿ ಚಂದ್ರ ಕಣ್ಣೊಳಗಾಡಿ
ಸಿದ್ಧ ಶಕ್ತಿ ಜಗದುದ್ದಕ್ಕೂ ಬಾನಿನ ಕಮಾನು
ಸರ್ವಶಕ್ತ ಸಮುದ್ರ ಸುತ್ತಿ ಬಳಸಿರಲು ಸುತ್ತ

ಸ್ವಯಂ ಪೂರ್ಣ ಇಳಾದೇವಿ ಸಿದ್ಧ ಗಾಳಿಯ ಮೂಸಿ
ಸಿದ್ದ ನೀರನು ಕುಡಿದು ನಿತ್ಯ ಬೆಳಗುವಳು
ವಿರಕ್ತಿ ಬೀಜವ ಬಿತ್ತಿ ತ್ಯಾಗ ವೃಕ್ಷವ ಬೆಳೆಸಿ
ಮನದ ಮೂಲೆಯಲಿ ನಳನಳಿಸುತಿಹಳು

- ವೀಚಿ





# ಬಸವಣ್ಣ ಬೋಧಿಸಿದ ಜಾತ್ಯತೀತತೆ

- ಪ್ರೊ. ಆರ್. ರಾಚಪ್ಪ
'ರಜತಗಿರಿ', ೧೫೯, ೭ನೇ 'ಬಿ' ಮೇನ್,
ವಿಜಯನಗರ, ಬೆಂಗಳೂರು-೪೦

ಜಾತಿ ವ್ಯವಸ್ಥೆ ನಿನ್ನೆ ಇಂದಿನದಲ್ಲ. ಪ್ರಾಚೀನ ಕಾಲದಿಂದಲೂ ಇದು ಜನತೆಯಲ್ಲಿ ಮೈಗೂಡಿ ನಿಂತಿದೆ. ಇದು ಕೇವಲ ಭಾರತಕ್ಕೆ ಸೀಮಿತವಲ್ಲ; ಇಡೀ ಪ್ರಪಂಚದಲ್ಲೇ ಇದೆ. ಇದರಿಂದ ಆಗಿರುವ ಸಾಮಾಜಿಕ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು. ಮನುಷ್ಯ ಮನುಷ್ಯನನ್ನು ದ್ವೇಷಿಸಲು ಆರಂಭಿಸಿದುದು ಇಲ್ಲಿಂದಲೇ. ಕೇವಲ ಹುಟ್ಟಿನ ಕಾರಣದಿಂದ ಮೇಲು-ಕೀಳು ಎಂಬ ಭಾವನೆ ಸಮಾಜದಲ್ಲಿ ತುಂಬಿಕೊಂಡು ಮನುಷ್ಯ-ಮನುಷ್ಯರ ನಡುವೆ ಈ ಜಾತಿಯ ಅಡ್ಡಗೋಡೆ ಎದ್ದು ನಿಂತಿದೆ.

### ಎಲ್ಲ ಧರ್ಮಗಳಲ್ಲಿ

ಎಲ್ಲಾ ಧರ್ಮಗಳಲ್ಲಿಯೂ ಈ ಜಾತಿ ವ್ಯವಸ್ಥೆ ರೂಢಿಯಲ್ಲಿರುವುದನ್ನು ಕಾಣಬಹುದು. ಕ್ರಿಶ್ಚಿಯನ್ ಧರ್ಮದಲ್ಲಿ, ಇಸ್ಲಾಂ ಧರ್ಮದಲ್ಲಿ, ಹಿಂದೂ ಧರ್ಮದಲ್ಲಿ ಜಾತಿ ವ್ಯವಸ್ಥೆಗಳು ತುಂಬಿವೆ. ಇದರಿಂದ ಅನೇಕ ಅನಾಹುತಗಳಾಗಿವೆ. ಜಾತಿ ವ್ಯವಸ್ಥೆಯಿಂದ ಇಡೀ ಮನುಕುಲ ತಲ್ಲಣಿಸಿದೆ. ಪರಸ್ಪರ ದ್ವೇಷ, ಅಸೂಯೆಗಳು ಬೆಳೆದು ಮನುಷ್ಯ-ಮನುಷ್ಯನನ್ನು ಕಿತ್ತು ತಿನ್ನುವ ಮಟ್ಟಕ್ಕೆ ಹೋಗಿದೆ. ಈ ಸ್ವೈರವರ್ತನೆ ಇಡೀ ಮನುಕುಲ ತಲೆತಗ್ಗಿಸುವಂತಹುದಾಗಿದೆ. ಈ ಕ್ರೂರ ವರ್ತನೆಯನ್ನು ತಿದ್ದಲು ಮನುಷ್ಯ-ಮನುಷ್ಯರು ಕೂಡಿ ಬಾಳುವಂತೆ ಮಾಡಲು ಅನೇಕ ಆದರ್ಶ ಜೀವಗಳು ಈ ಜಗತ್ತಿನಲ್ಲಿ ಆಗಿಹೋಗಿವೆ. ಜೀಸಸಾ ಕ್ರೈಸ್ಟ್, ಮಹಮದ್ ಪೈಗಂಬರ್, ಮಹಾವೀರ, ಜಿನ, ಬುದ್ಧ, ಶಂಕರ, ರಾಮಾನುಜ ಮೊದಲಾದವರು ಈ ನಿಟ್ಟಿನಲ್ಲಿ ಶ್ರಮಿಸಿರುವುದು ಇತಿಹಾಸವಾಗಿ ಉಳಿದಿದೆ. ಇದೇ ಸಾಲಿನಲ್ಲಿ ಎದ್ದು ಕಾಣುವ ಮತ್ತೊಂದು ಹೆಸರು ಬಸವಣ್ಣನವರದ್ದು.

ಬಸವಣ್ಣನವರು ೧೨ನೇ ಶತಮಾನದಲ್ಲಿ ಶೈವ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದರು. ತಂದೆ ಮಾದರಸ, ತಾಯಿ ಮಾದಲಾಂಬೆ ಎಂದು ತಿಳಿದು ಬರುತ್ತದೆ. ಇವರ ಬಾಲ್ಯ ಜೀವನ ಬಾಗೇವಾಡಿಯಲ್ಲಿ ಸಾಗಿತು. ಬಸವಣ್ಣನವರಿಗೆ ಎಂಟು ವರ್ಷಗಳಾದಾಗ ತಂದೆ ತಮ್ಮ ಧರ್ಮಾಚರಣೆಗೆ ಅನುಗುಣವಾಗಿ ಯಜ್ಞೋಪವೀತ ಧಾರಣೆ ಕಾರ್ಯ ವ್ಯವಸ್ಥೆಗೊಳಿಸಿದಾಗ ಬಸವಣ್ಣನವರು ಅದನ್ನು ತಿರಸ್ಕರಿಸಿ ಊರನ್ನೇ ಬಿಟ್ಟು ಕೂಡಲ ಸಂಗಮದತ್ತ ಬಂದರೆಂದು ತಿಳಿಯುತ್ತದೆ. (ಹರಿಹರನ ಬಸವರಾಜದೇವರ ರಗಳೆ) ಬಸವಣ್ಣನವರೊಂದಿಗೆ ಅವರ ಅಕ್ಕ ನಾಗಮ್ಮನೂ ಹೊರಟುಬಂದರೆಂದು ಕೂಡ ತಿಳಿದು ಬರುತ್ತದೆ.



ಅಂದಿನ ಸಮಾಜ ವ್ಯವಸ್ಥೆಯ ಧಾರ್ಮಿಕಾಚರಣೆಯನ್ನು ದಿಟ್ಟತನ ದಿಂದ ತಿರಸ್ಕರಿಸಿ ಹೊರಟ ಬಸವಣ್ಣ ನವರ ಮನಸ್ಸನ್ನು ಅಂದಿನ ಸಮಾಜ ದಲ್ಲಿ ರೂಢಿಯಲ್ಲಿದ್ದ ಅಂಧ ಆಚರಣೆಗಳು ಕಾಡಿರಬೇಕು. ಆಚರಣೆ ಹೇಳುವ ಜನರಲ್ಲಿ ಹೇಳಿಕೆಗೂ ಆಚರಣೆಗೂ ಸಂಬಂಧವಿಲ್ಲದಿರುವು ದನ್ನು ಕಂಡು ಅವರು ರೋಸಿ ಹೋಗಿರಬೇಕು. ಹಾಗಾಗಿ "ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ" ಎಂದು ನೊಂದು ನುಡಿದಿದ್ದಾರೆ.

### ನಡೆ-ನುಡಿ ಶುದ್ಧವಿರಬೇಕು

ನಮ್ಮ ನಡೆ-ನುಡಿ ಶುದ್ಧವಿರಬೇಕು. ಇಲ್ಲವಾದರೆ ಅದು ಮನುಷ್ಯ ಜನ್ಮವಲ್ಲ. ನಡೆ-ನುಡಿಗಳ ಅಂತರ, ಆಚರಣೆಯಲ್ಲಿನ ಡಾಂಭಿಕತನ, ಮನುಷ್ಯ-ಮನುಷ್ಯರ ನಡುವೆ ದೊಡ್ಡ ಕಂದಕವನ್ನು ಉಂಟುಮಾಡಿದೆ.

ಇದು ಹೀಗಿರುವಲ್ಲಿ ಜಾತೀಯತೆಯ ಪಿಡುಗು ಈ ಕಂದಕವನ್ನು ಮತ್ತಷ್ಟು ದೊಡ್ಡದು ಮಾಡಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಸೃಷ್ಟಿಸಿದ ವೈದಿಕಾಚಾರ್ಯರು "ಓದುವ-ಓದಿಸುವ ಕಾರ್ಯ ಬ್ರಾಹ್ಮಣನದು, ಕಾದಿ ರಕ್ಷಿಸುವ ಕಾರ್ಯ ಕ್ಷತ್ರಿಯನದು, ವ್ಯವಹಾರ ಕಾರ್ಯ ವೈಶ್ಯರದು, ಸೇವಾ ಕಾರ್ಯ ಶೂದ್ರರದು" ಎಂದು ನಿಯಮಿಸಿದರು. ಆದರೆ ಇದರ ಆಚರಣೆಯಲ್ಲಿ ಮನುಷ್ಯ ಮನುಷ್ಯರ ನಡುವೆ ತಾರತಮ್ಯ ಉಂಟಾದುದು ದೊಡ್ಡ ದುರಂತವೇ ಸರಿ. 'ಮನು' ರೂಪಿಸಿದ ಈ ವರ್ಣವ್ಯವಸ್ಥೆ ಸಾಮಾಜಿಕವಾಗಿ ಸೂಕ್ತವಾದುದಾದರೂ ಇದನ್ನೂ ಆಚರಣೆಗೆ ತರುವಲ್ಲಿ ಅನೇಕ ಅನ್ಯಾಯಗಳು ನಡೆದವು. ಮನುಷ್ಯ-ಮನುಷ್ಯರು ತಮ್ಮ ಜಾತಿಯ ಉತ್ತಮಿಕೆಯನ್ನು ಸ್ಥಾಪಿಸುವ ನೆವದಲ್ಲಿ ಇನ್ನೊಂದು ಜಾತಿಯ ಮನುಷ್ಯರನ್ನು ಹೀಯಾಳಿಸುವ, ಕಡೆಗಣಿಸುವ ಭಾವನೆ ಬೆಳೆಸಿಕೊಂಡರು. **"ಮನುಷ್ಯ ಜಾತಿ ತಾನೊಂದೆವಲಂ"** ಎಂಬ ಮಾತನ್ನು ಮರೆತು, ಜಾತಿ-ಉಪಜಾತಿಗಳು ಯಥೇಚ್ಛವಾಗಿ ರೂಪಗೊಂಡವು. **"ಸರ್ವೇ ಜನಾಃ ಸುಖಿನೋ ಭವಂತು"** ಎಂಬ ಮಂತ್ರ ಹೋಗಿ **"ಸ್ವಜನಾಃ ಸುಖಿನೋ ಭವಂತು"** ಮಂತ್ರವಾಗಿ ಮಾರ್ಪಟ್ಟಿತು.

**ಜಾತಿ ಎರಡೇ**

ತಮ್ಮಕಾಲಕ್ಕೆ ಆಚರಣೆಯಲ್ಲಿದ್ದ ಜಾತಿ ವ್ಯವಸ್ಥೆಯನ್ನು ಬಸವಣ್ಣನವರು ಖಂಡಿಸಿದರು. ಜಾತಿ ವ್ಯವಸ್ಥೆ ಕೇವಲ ಮನುಷ್ಯಕೃತ, ದೈವ ನಿರ್ಮಿತವಲ್ಲ. ಆತ್ಮ ಎಲ್ಲರಿಗೂ ಒಂದೇ. ಅದರಲ್ಲಿ ತಾರತಮ್ಯವಿಲ್ಲ. ಸ್ತ್ರೀ-ಪುರುಷ ಎಂಬುವೆರಡೇ ಜಾತಿ ದೈವ ದೃಷ್ಟಿಯಲ್ಲಿ ಎಂದು ಸಾರಿದರು ಬಸವಣ್ಣ. ಬಸವಣ್ಣನವರಿಗೂ ಪೂರ್ವದಲ್ಲಿ, ಜೇಡರದಾಸಿಮಯ್ಯ -

**"ಮೊಲೆ ಮುಡಿ ಬಂದರೆ ಹೆಣ್ಣೆಂಬರು,**
**ಗಡ್ಡ ಮೀಸೆ ಬಂದಡೆ ಗಂಡೆಂಬರು**
**ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ**
**ಗಂಡೂ ಅಲ್ಲ ಕಾಣಾ ರಾಮನಾಥಾ"** ಎಂದು ಸಾರಿದ್ದನು.

ಮಾದಾರ ಚೆನ್ನಯ್ಯ, ಕುಂಬಾರ ಗುಂಡಯ್ಯ, ಡೋಹರ ಕಕ್ಕಯ್ಯ ಮೊದಲಾದವರು ಉತ್ತಮ ಆಚರಣೆಗಳಿಂದ ಶಿವನಿಗೆ ಹತ್ತಿರವಾದುದನ್ನು ತಿಳಿದಿದ್ದ ಬಸವಣ್ಣನವರು ಮನುಷ್ಯನಿಗೆ ಆಚರಣೆ ಮುಖ್ಯ, ಜಾತಿಯಲ್ಲ ಎಂದು ಸಾರಿದರು.

**ಸೆಟ್ಟಿಯೆಂಬೆನೆ ಸಿರಿಯಾಳನ?**
**ಮಡಿವಾಳನೆಂಬೆನೆ ಮಾಚಯ್ಯನ?**
**ಡೋಹಾರನೆಂಬೆನೆ ಕಕ್ಕಯ್ಯನ?**
**ಮಾದಾರನೆಂಬೆನೆ ಚೆನ್ನಯ್ಯನ ಆನು ಹಾರುವನೆಂದರೆ**
**ಕೂಡಲ ಸಂಗಮದೇವ ನಗುವನಯ್ಯ.**

ಎಂದು ಹೇಳಿ ವ್ಯಕ್ತಿಯನ್ನು ಆತನ ವ್ಯಕ್ತಿತ್ವದ ಮೇಲೆ ಅಳೆಯಬೇಕು, ಜಾತಿಯಿಂದಲ್ಲ ಎಂದು ನಿರೂಪಿಸಿದರು. ತಾನು ವಿಪ್ರಕುಲದಲ್ಲಿ ಬಂದವನೆಂದು ಶ್ರೇಷ್ಠ ವ್ಯಕ್ತಿತ್ವ, ಚಾರಿತ್ರ್ಯದಿಂದ ಕೂಡಿದ ಶರಣರ ಜಾತಿವಿಡಿದು ಆಡಿದರೆ ಕೂಡಲ ಸಂಗಯ್ಯ ಒಲಿಯನು. ಅಷ್ಟೇ ಅಲ್ಲ ನನ್ನ ಆಚರಣೆ ಕಂಡು ನಗುವನು. ಆದ್ದರಿಂದಲೇ,

**"ಉತ್ತಮ ಕುಲದಲ್ಲಿ ಹುಟ್ಟಿದನೆಂಬ**
**ಕಷ್ಟತನದ ಹೊರೆಯ ಹೊರಿಸದಿರಯ್ಯಾ"** ಎಂದು ಬೇಡುತ್ತಾ ಉತ್ತಮ-ನೀಚ ಕುಲಗಳೆಂಬ ವಿಚಾರವನ್ನೇ ನಿರಾಕರಿಸುವರು.

**ಆಚರಣೆಯಿಂದ ಜಾತಿ**

ಜಾತಿಗಳು ಹುಟ್ಟಿನಿಂದಲ್ಲ, ಅವರವರ ಆಚರಣೆಗೆ ಅನುಸಾರವಾಗಿ ಎಂಬುದನ್ನು ದೃಢೀಕರಿಸುತ್ತಾ,

**"ಕಾಸಿ ಕಮ್ಮಾರನಾದ,**
**ಬೀಸಿ ಮಡಿವಾಳನಾದ,**
**ಹಾಸನಿಕ್ಕಿ ಸಾಲಿಗನಾದ,**
**ವೇದವನೋದಿ ಹಾರುವನಾದ"** ಎಂದು ಸಾರಿಟ್ಟು ಹೇಳಿದರು.

ಸಮಾಜದಲ್ಲಿ ಅಂದಿಗೆ ರೂಢಿಯಲ್ಲಿದ್ದ ಹೊಲೆಯ, ಮಾದಿಗ ಈ ಜಾತಿಗಳನ್ನು ಕುರಿತು ಟೀಕಿಸಿದ ಬಸವಣ್ಣನವರು ಹೊಲೆತನ-ಮಾದಿಗತನಗಳು ಬಂದುದು ಆಚರಣೆಯಿಂದದೇ ಹೊರತು ಹುಟ್ಟಿನಿಂದಲ್ಲ ಎಂದು ಹೇಳುತ್ತಾ "ಕೊಲುವನೇ ಮಾದಿಗ, ಹೊಲಸ ತಿಂಬುವನೇ ಹೊಲೆಯ" ಎಂದು ನಿರೂಪಿಸಿದರು. ವ್ಯಕ್ತಿಯ ವ್ಯಕ್ತಿತ್ವವನ್ನು ಆತನ ವರ್ಣನೆಯಿಂದ ಅಳೆಯಬೇಕು. ಒಬ್ಬ ವ್ಯಕ್ತಿ ಉತ್ತಮನಾಗುವುದು-ಕೀಳಾಗುವುದು ಆತನ ವರ್ತನೆಯಿಂದ ಮಾತ್ರ, ಹುಟ್ಟಿನಿಂದಲ್ಲ ಎಂದು ನಿರೂಪಿಸಲು-

**"ವ್ಯಾಸ ಬೋಯಿತಿಯ ಮಗ,**
**ಮಾರ್ಕಂಡೇಯ ಮಾತಂಗಿಯ ಮಗ,**
**ಮಂಡೋದರಿ ಕಪ್ಪೆಯ ಮಗಳು,**
**ಕುಲದಿಂದ ಮುನ್ನೇನಾದಿರಿಂಭೋ?**
**ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ,**
**ಕಶ್ಯಪ ಕಮ್ಮಾರ, ಕೌಂಡಿಣ್ಯನೆಂಬ ಋಷಿ,**
**ಮೂರು ಭುವನವರಿಯೆ ನಾವಿದ ಕಾಣಿಭೊ"**





ಎಂದು ವ್ಯಾಸ, ಮಾರ್ಕಂಡೇಯ, ಕಶ್ಯಪ, ದೂರ್ವಾಸ, ಕೌಂಡಿಣ್ಯ ಮೊದಲಾದವರು ಮಹರ್ಷಿಗಳೆನಿಸಿದುದು ಅವರವರ ಆಚರಣೆಯಿಂದ ಜಾತಿಯಿಂದಲ್ಲ. ಮಂಡೋದರಿ ಪಂಚ ಪತಿವ್ರತೆಯರಲ್ಲಿ ಒಬ್ಬಳೆನಿಸಿದುದು ತನ್ನ ಆಚರಣೆಯಿಂದ. ಹುಟ್ಟಿನಿಂದಲ್ಲ. ಆದುದರಿಂದ ಜಾತಿವಿಡಿದು ವಿಚಾರ ಮಾಡಬಾರದು ಎಂದು ಹೇಳಿ ಮನುಷ್ಯ ಜಾತಿ ಒಂದೇ ಎಂದು ಪ್ರತಿಪಾದಿಸಿದರು ಬಸವಣ್ಣನವರು.

**ಕುಲಜ ಯಾರು?**

ಕುಲೀನ ಯಾರು? ಎಂಬ ಪ್ರಶ್ನೆಗೆ ಬಸವಣ್ಣನವರು "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂದು ಉತ್ತರ ಹೇಳಿದರು. "ಶ್ವಪಚೋಪಿಯಾದರೇನು, ಶಿವಭಕ್ತನೇ ಕುಲಜನು" ಎಂದು ಸಾರಿದರು. ಭಕ್ತರಾದವರು ಒಂದು ಕುಲ, ಭಕ್ತನಾದವನು ಕಳ್ಳದ, ಹುಸಿಯದ, ಕೊಲ್ಲದ, ಅನ್ಯರಿಗೆ ಅಸಹ್ಯ ಪಡದ ತನ್ನ ಬಣ್ಣಿಸದ, ಇದಿರ ಹಳಿಯದ ಶುದ್ಧ ಚಾರಿತ್ರ್ಯದವನಾಗಿರಬೇಕು. ಇಂತಹ ಭಕ್ತನನ್ನು ಸಂಗಮದೇವ ಒಲಿಯುವನು. ಅದು ಬಿಟ್ಟು ಪರಧನ, ಪರಸ್ತ್ರೀಯೆಂದು ಅಳುಪುವ ಕೀಳಾಗಿ ವರ್ತಿಸುವ ವ್ಯಕ್ತಿ ಭಕ್ತನಾಗಲಾರ, ಕೀಳುವರ್ತನೆಯುಳ್ಳವನೆ ಶೂದ್ರ, ಉತ್ತಮ ವರ್ತನೆಯುಳ್ಳವನೆ ಕುಲಜ ಎಂದು ಹೇಳಿದರು.

ಜಾತ್ಯತೀತ ರಾಷ್ಟ್ರ ಎಂದು ಘೋಷಿಸಿಕೊಂಡಿರುವ ನಾವು ಇಂದು ಜಾತಿಗಳನ್ನು ಸಹಸ್ರ ಸಂಖ್ಯೆಯಲ್ಲಿ ಸೃಷ್ಟಿಸಿಕೊಂಡು ರಾಷ್ಟ್ರದಲ್ಲಿ ಜಾತಿ ವೈಷಮ್ಯವನ್ನು ಹೆಚ್ಚಿಸುತ್ತಿದ್ದೇವೆ. ಇಡೀ ಜಗತ್ತಿಗೆ ಬೆಳಕನ್ನು ನೀಡಿದ ಭರತಖಂಡ ಇಂದು ತಾನೇ ಅಂಧಕಾರದಲ್ಲಿ ಮುಳುಗಿದೆ. ದೀಪದ ಬುಡದಲ್ಲಿ ಕತ್ತಲು ಎಂಬಂತಾಗಿದೆ. ಹನ್ನೆರಡನೇ ಶತಮಾನದಲ್ಲಿ ಈ ಜಾತ್ಯತೀತತೆಯ ಕನಸನ್ನು ಕಂಡು ಅದನ್ನು ನನಸಾಗಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ ಬಸವಣ್ಣನವರ ನಂತರ ಅವರ ಅನುಯಾಯಿಗಳಾಗಿ ನಾವು ಮತ್ತೆ ಜಾತೀಯತೆಯ ಕಡೆಗೆ ಜಾರುತ್ತಿರುವುದು ತೀರಾ ವಿಪರ್ಯಾಸವೇ ಸರಿ.

ಈ ಜಾತಿ ವಿಂಗಡಣೆಯನ್ನು ಬಿಟ್ಟು, ಮನುಷ್ಯ ಜಾತಿ ತಾನೊಂದೆ ಎಂದು ಪರಿಭಾವಿಸಿ, ಉತ್ತಮ-ಕೀಳು, ಬಡವ-ಬಲ್ಲಿದ ಎಂಬ ಆಚರಣೆಯನ್ನು ತೊರೆದು ಸರ್ವಸಮತಾ ಭಾವದಿಂದ ಬದುಕಿ ನಮ್ಮ ಬಾಳನ್ನು ಹಸನಾಗಿಸಿಕೊಳ್ಳೋಣ. ಆಗ ಬಸವಣ್ಣನವರ ತತ್ವನಿರೂಪಣೆಗೆ ಅರ್ಥವಂತಿಕೆ ಬರುತ್ತದೆ. ●

ಕನ್ನಡ ನಾಡು ಧರ್ಮಭೂಮಿ, ಪುಣ್ಯಭೂಮಿ, ಧರ್ಮ-ಕರ್ಮಗಳ ಸಮನ್ವಯದ ಭೂಮಿ. ಇಂತಹ ಪವಿತ್ರ ಭೂಮಿಯಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದಂತಹ ಕ್ರಾಂತಿ ಅಪೂರ್ವವಾದುದು, ಅಮೋಘವಾದುದು. ಕರ್ನಾಟಕದಲ್ಲಿ ನಡೆದ ಈ ಮಹಾನ್ ಕ್ರಾಂತಿಯ ನೇತಾರ ಕ್ರಾಂತಿಯೋಗಿ ಬಸವಣ್ಣನವರು. ಸಾಮಾಜಿಕ, ಆರ್ಥಿಕ, ನೈತಿಕ ಹಾಗೂ ಸಾಹಿತ್ಯ ಕ್ರಾಂತಿಯ ಮೂಲಕ ಮಾನವೀಯ ಮೌಲ್ಯಗಳಿಗೆ ಒಂದು ವಿಶೇಷವಾದ ಸ್ಥಾನವನ್ನು ನೀಡುವುದರೊಂದಿಗೆ ಸಮಾಜದಲ್ಲಿನ ಅಂಧಶ್ರದ್ಧೆ, ಮೂಢನಂಬಿಕೆಗಳ ವಿರುದ್ಧ ವೈಚಾರಿಕ ಸಮರವನ್ನು ಸಾರಿದ ಹಿರಿಮೆ-ಗರಿಮೆ ಜಗಜ್ಯೋತಿ ಬಸವಣ್ಣನವರದು.

- ಸಿ. ಸೋಮಶೇಖರ್

ಭಾಗ-೪

# ಬಸವಣ್ಣನವರ ವಚನಗಳಲ್ಲಿ ಯುಗಪ್ರಜ್ಞೆ ಮತ್ತು ಮೌಲ್ಯಗಳು

-ಸುಜನಾ

ಬಸವಣ್ಣನವರು ಹುಟ್ಟಾ ಬ್ರಾಹ್ಮಣರಾಗಿ, ಅಥವಾ ಆರಾಧ್ಯ ಬ್ರಾಹ್ಮಣರಾಗಿ ಸಂಪ್ರದಾಯಸ್ಥರಾಗಿದ್ದು ತಮ್ಮ ಕುಲಾಚಾರಪರಿಮಿತ ವಾತಾವರಣಕ್ಕೆ ಹೇಸಿ ಹೊರಬಂದು, ಸರ್ವಂಕಷ ವಿಶ್ವಧರ್ಮವೊಂದನ್ನು ಅರಸಿ ವರಿಸಿದುದರ ಸಂಕೇತವಾಗಿ ಜನಿವಾರ ಪ್ರಕರಣ ಬರುತ್ತದೆ. ಜನಿವಾರ ಕಿತ್ತವರು ಲಿಂಗಧಾರಣ ಮಾಡಿದರು. ಹಳೆಯ ಸಂಪ್ರದಾಯದ ಕ್ಲಿನ್ನವಾದ ಮೌಲ್ಯಗಳನ್ನೆಲ್ಲ ಯಾವ ಕಾರಣಕ್ಕೂ ಒಪ್ಪದೆ ಕಿತ್ತೊಗೆದು ಹೊಸ ಬೆಲೆಗಳನ್ನು ಅಗೆಹಾಕುತ್ತಾರೆ. ಈ ಜನಿವಾರ ಲುಂಚನದಲ್ಲೆ ತಿಳಿಯುತ್ತದೆ. ಬಸವಣ್ಣನವರು ಯಾವ ಕಾಲ, ದೇಶದ ಬೆಲೆಯಿಂದಲೂ ಮಹಾಕ್ರಾಂತಿಪಟು, ಬಂಡಾಯಗಾರ ಎಂದು. ಈ ಬಂಡಾಯಕ್ಕೆ ಕಾರಣ ವೈಯಕ್ತಿಕ ರುಚಿ ಅರುಚಿಯಲ್ಲ; ಭೋಗಾಸಕ್ತಿಯೂ ಅಲ್ಲ. (ವಿದೇಶಗಳಿಗೆ ಹೋದ, ದನದ ಮಾಂಸ ತಿನ್ನುವಾಸೆ ಹುಟ್ಟಿಕೊಂಡ, ಸಂಪ್ರದಾಯಸ್ಥ ತರುಣ **'ಬಂಡಾಯ'**ವೆದ್ದು ತನ್ನ ಜನಿವಾರವನ್ನು ಕಿತ್ತುಕೊಳ್ಳುವಂತೆಯೂ ಅಲ್ಲ. ಇದು) ಅಷ್ಟೇ ಅಲ್ಲ, ಅತಿ ಪರಿಚಯಜನ್ಯವಾದ ಅಸಡ್ಡೆ-ಅಗೌರವವೂ ಅಲ್ಲ. ಆದರೆ ಇದಕ್ಕೆ ವೈಯಕ್ತಿಕವಲ್ಲದ ಯುಗವ್ಯಾಪಕವಾದ ಕಾರಣವಿತ್ತು. ಜ್ಞಾನದ ಹೆಸರಿನಲ್ಲಿ ಅಜ್ಞಾನಿಗಳಾಗಿರುವ, ವರ್ಣಧರ್ಮದ ಹೆಸರಿನಲ್ಲಿ ಸಾವಿರ ಹೋಳಾಗಿ ಒಡೆದು ಕೂಡದೆ ಮುಕ್ಕಾಗಿರುವ, ನಾನಾ ದೈವಗಳ ಭಕ್ತಿಯ ನೆವದಲ್ಲಿ ಭೀತಿಗ್ರಸ್ಥರಾಗಿರುವ ಜನಸಾಮಾನ್ಯ ಸಮೂಹ ಅವರ ಕಣ್ಣ ಮುಂದೆ ನಿಚ್ಚಳವಿತ್ತು. ಅವರ ಮೇಲ್ಮೆಗೆ ನಿರಂತರ ಆಹ್ವಾನವಿತ್ತು. ಅಂದು ಆ ಕರೆಗೆ ಹಿಂದೆಂದೂ ಇದ್ದಿರದ ತೀವ್ರತೆ, ಅನುಲ್ಲಂಘ್ಯತೆ ಒದಗಿ ಬಂದಿತ್ತು. ಸತ್ಪಾತ್ರರಾದ ಆ ವ್ಯಕ್ತಿ ಅದಕ್ಕೆ ಓಗೊಡದೆ ವಿಧಿಯಿರಲಿಲ್ಲ. ಆದ್ದರಿಂದಲೇ ತಮ್ಮ ಉತ್ತಮಿಕೆಯ ಎಲ್ಲ ಕಿರೀಟಕವಚಾದಿ ಸಿಂಹಪೀಠಗಳನ್ನೆಲ್ಲ ಜನಿವಾರ-ವೇದಾಗಮಶಾಸ್ತ್ರಾಚಾರಗಳನ್ನೆಲ್ಲ ಕಿತ್ತೆಸೆದರು. ಪತಿತರನ್ನು ಮೇಲೆತ್ತುವ ಮೊದಲು ಅವರನ್ನು ಅಪ್ಪಿಕೊಳ್ಳಹೋದರು. ಆದರೆ ಆತ್ಮಸಂರಕ್ಷಣೆ ಹೊಂದಿಲ್ಲದ ಆ ಬಗೆಯ ಉದ್ಧಾರ ಕಾರ್ಯಕ್ಕೆ ಹೋದರೆ, ಮುಳುಗುವ ನಾವೆಯನ್ನು ಮೇಲೆತ್ತುವೆನೆಂದು ಹೋದ ಅಂಬಿಗನಂತಾಗುತ್ತದೆ. ಆದರೆ ಅಧಿಕ ಮಠ ಸತ್ವಸಂಪನ್ನರಾಗಿ ಈ ಅಣ್ಣ ಆ ಭವಿಜಲಧಿಯಲ್ಲಿ ಧುಮಿಕ್ಕುತ್ತಾರೆ. ಅವರೇನೋ ಕೈಗೆ ಸಿಕ್ಕಷ್ಟು ಜೀವರನ್ನು ಮೇಲೆತ್ತಿದರು; ತಾವೂ ಉಸಿರು ಕಟ್ಟಿದ್ದರೂ, ನೀರು ಕುಡಿದರೂ ಕೆಲವರನ್ನು ಜುಟ್ಟು ಹಿಡಿದು, ಕೆಲವರನ್ನು ಕೈ ಕಾಲು ಹಿಡಿದು, ಹಲವರನ್ನು ತಬ್ಬಿ ಮೇಲೆತ್ತಿದ್ದರು. ಅವರು ಈಜಿ ದಡ ಸೇರಿದ ಮೇಲೆ ರಕ್ಷಿತರಾದವರೆಷ್ಟೋ ಜನ, ಕಾಲು ಜಾರಿ ಮತ್ತೆ ಮುಳುಗುವಂತಾದುದೂ ಉಂಟು! ಅದು ಹೋಗಲಿ. ಆದರೆ ಅವರು ಮುಳುಗುವವರನ್ನೆತ್ತುವಾಗ ಆ ಭವನಿಮಗ್ನರಿಗೆ ಈಜುಬಂಡೆಗಳಾಗಿ, ಗಾಳಿಚೆಂಡುಗಳಾಗಿ ನೀಡಿದುದೆ ಈ ಲಿಂಗ ಲಾಂಛನ!

ಬಸವಣ್ಣನವರು ತಕ್ಷಣವಾಗಿ ಮಾಡಬೇಕಾಗಿದ್ದ ಮಹತ್ಕಾರ್ಯವೆಂದರೆ ಜಾತಿ ಕಾರಣಕ್ಕಾಗಿ ಒಡೆದು ಚೂರಾಗಿ ಬೆನ್ನೆಲುಬಿಲ್ಲದ ಜಂತುಗಳಾಗಿದ್ದ ದಲಿತರನ್ನೆಲ್ಲ ಒಟ್ಟುಗೂಡಿಸಿ, ತಾವೆಲ್ಲ ಒಂದೇ ದೇವರ ಮಕ್ಕಳೆಂಬುದನ್ನೂ ಹಾಗೂ ಉದ್ಧಾರ ಸಾಧ್ಯವೆಂಬುದನ್ನೂ, ತಮ್ಮ ಉದ್ಧಾರ ಅನ್ಯಮಧ್ಯವರ್ತಿಯಿಲ್ಲದೆಯೇ ಸಾಧ್ಯ ಎಂಬುದನ್ನೂ ಅವರಿಗೆ ಮನದಟ್ಟು ಮಾಡಿಕೊಡಬೇಕಾದುದು. ಇದನ್ನು ಮಾಡಬೇಕಾದರೆ ಅವರು ಆತನಕವೂ ಬಂಧಿತರಾಗಿದ್ದ ನಾನಾ ಆವರಣಗಳಿಂದ ಬಿಡಿಸಿ ಹೊರಬರಬೇಕಿತ್ತು. ಹಾಗೆಂದು ಅವರನ್ನು ನಿರಾವರಣದಲ್ಲಿಡುವುದೆಂದೂ ಅಲ್ಲ, ಶಿವಾವರಣ ರಕ್ಷಿತರನ್ನಾಗಿ ಮಾಡುವುದೆಂದು. ಜಾತಿಯ ಆವರಣ, ವೃತ್ತಿಯ ಆವರಣ - ತನ್ಮೂಲಕವಾಗಿ ಮೇಲು ಕೀಳೆಂಬ ಆವರಣ. ಆಯಾ ಜಾತಿ ದೈವಗಳ ಸಮಯಾಚಾರದ ಭಯಂಕರ ಆವರಣ. ಈ ಎಲ್ಲ ಆವರಣವನ್ನೂ ಕಳಚಿ ಸಾಮಾನ್ಯರನ್ನು ರಕ್ಷಿಸುವಂತಹ ಶಿವಾವರಣ ಯಾವುದು? ಹೊಲೆಯನನ್ನು ಹರಿಜನ ಎಂದು ಕರೆದ ಮಾತ್ರಕ್ಕೆ ಅವನನ್ನು ಆ ತನ್ನ ಎಲ್ಲ ಆವರಣದಿಂದ ಬದುಕಿಸಿದಂತಾಯಿತೆ? ಹೊಲೆಯ-ಚಮ್ಮಾರ-ಕಮ್ಮಾರ-ಬಡಗಿ-ಕುಂಬಾರ-ನೇಕಾರ-ಸಿಂಪಿಗ-ಅಂಬಿಗ-ಮಡಿವಾಳ-ಕ್ಷೌರಿಕ ಈ ನೂರಾರು ವೃತ್ತಿ-ಜಾತಿ-ದೇವತಾ ಆವರಣಬದ್ಧರಾದವರನ್ನು ಮಹದಾವರಣದಲ್ಲಿರಿಸುವುದು ಹೇಗೆ? ಅದ್ವೈತ ಬೋಧನೆಯೂ ಈ ಮಹತ್ಕಾರ್ಯದ ಆಗತ್ಯತೆಯನ್ನು ಕಂಡುಕೊಳ್ಳಹೋಗಲಿಲ್ಲ. ಬಸವಣ್ಣನವರಿಗೆ





ಇದನ್ನು ಸಾಧಿಸದೆ ವಿಧಿಯಿಲ್ಲದಂತೆ ಅನುಭವಕ್ಕೆ ಬಂತು. ಆದ್ದರಿಂದಲೇ ಶಿವಲಿಂಗ ಲಾಂಛನವನ್ನು ನಾನಾಕ್ಷುದ್ರಾವರಣ ಭೇದಕಯಂತ್ರವನ್ನಾಗಿ-ಮಂತ್ರವನ್ನಾಗಿ ಮಾಡಿಕೊಳ್ಳುತ್ತಾರೆ ಬಸವಣ್ಣನವರು. ಜಾತಿಕಟ್ಟಿನಿಂದ ಬಿಡಿಸುವುದೆಂದರೆ ವೃತ್ತಿಯಿಂದ ನಿವೃತ್ತರನ್ನಾಗಿ ಮಾಡುವುದೆಂದಲ್ಲ, ವೃತ್ತಿಯಲ್ಲಿರಿಸಿ, ಆದರೆ ಜಾತಿಮುಕ್ತರನ್ನಾಗಿ ಮಾಡಿ, ಹಾಗೂ ಆಯಾ ಜಾತಿ ದೈವಗಳ ಸಮಯಾಚಾರಗಳಿಂದ ಭಯಾವರಣದಿಂದ ಬಿಡಿಸಿ, ಸಾಮಾನ್ಯರನ್ನು ಲಿಂಗಲಾಂಛನ ಒಂದುಗೂಡಿಸಿತು. ಲಿಂಗ ಲಾಂಛನದಂತಹ ಸಂಘಟಕ ಯಂತ್ರದ ನೆರವಿಲ್ಲದಿದ್ದರೆ, ಹೊಸದಾಗಿ ಒಂದುಗೂಡಿದ್ದ ಹಲವಾರು ವಿರುದ್ಧ ಜಾತಿವರ್ಗದ ಜನ ಎಷ್ಟೇ ರಾಜಕೀಯ ಸಾಮಾಜಿಕ ಒತ್ತಡವಿರುತ್ತಿದ್ದರೂ ಒಡೆದೇ ನಿಲ್ಲುತ್ತಿದ್ದರು. ಕಮ್ಯುನಿಸಂನಂತಹ ಜಾತ್ಯತೀತ ಪಕ್ಷದ ಬಲವತ್ತರವಾದ ಆರ್ಥಿಕ ರಾಜಕೀಯ ಆದರ್ಶಗಳೂ ಆ ಪಕ್ಷ ಸದಸ್ಯರ ಒಳಜಾತಿಯನ್ನು ಒಡೆಯುವಲ್ಲಿ ಈ ಯುಗದಲ್ಲೂ ಸಮರ್ಥವಾಗಿಲ್ಲವೆಂದಮೇಲೆ, ಅಂದು ಬಸವಣ್ಣನವರು ಬರಿದೆ ಸಾಮಾಜಿಕ ಕ್ರಾಂತಿಯ ಬಲದಿಂದ ಹೊರಟಿದ್ದರೆ ಆ ಏಕೀಕರಣ ಕಾರ್ಯವನ್ನು ಕಿಂಚಿತ್ತಾದರೂ ಸಾಧಿಸುತ್ತಿರಲಿಲ್ಲ. ಮೇಲಾಗಿ, ಆ ದಿನಗಳಲ್ಲಿ ಸಾಮಾಜಿಕ ರಾಜಕೀಯ ಆರ್ಥಿಕವಾದ ಏನನ್ನೂ ಧಾರ್ಮಿಕಾವರಣಕ್ಕೆ ವಿರುದ್ಧವಾಗದಂತೆಯೇ ಮಾಡಬೇಕಿತ್ತು; ಅಥವಾ ಧಾರ್ಮಿಕ ಮಾಧ್ಯಮಗಳ ಮೂಲಕವೇ ಸುಲಭವಾಗಿ ನೆರವೇರಿಸಬಹುದಿತ್ತು. ಲಿಂಗಲಾಂಛನ ಇಂಥ ಒಂದು ಅನಿವಾರ್ಯ ಸಾಧನ ಮಾಧ್ಯಮವಾಯಿತು ಬಸವಣ್ಣನವರಿಗೆ. ಪತಿತನನ್ನು ಹಳೆಯ ಜಾತಿಯಿಂದ ಬಿಡಿಸಬೇಕಾದರೆ, ಹಳೆಯ ಮಾರಿಮಸಣಿಯಿಂದ ರಕ್ಷಿಸಬೇಕಾದರೆ ತತ್ವನಿಷ್ಠವಾದ ಮಹತ್ತರ ಶಕ್ತಿಯಾಗಿ, ಸಾಧಕ ಮಂತ್ರವಾಗಿ ಈ ಲಿಂಗ ಪ್ರತ್ಯಕ್ಷ-ಸುಲಭವಾಗಿ ಒದಗಿಬರುತ್ತದೆ. ಹಿಂದಿನ ಜಾತಿಯಿಂದ ಬೇರಾಗಿದ್ದವನು, ಇಂದೂ ವೃತ್ತಿಕಾರಣದಿಂದ ಮೇಲು-ಕೀಳೆಂಬಂತೆ ತೋರುತ್ತಿರುವವನು: ಲಿಂಗದೀಕ್ಷೆಯ ಕಾರಣದಿಂದ ಒಂದಾಗುತ್ತಾನೆ. ಯಾರು ಏನೇ ಹೇಳಿದರೂ ಅವರು ಒಂದೇ ಎಂಬ ಭಾವಗಾಢವಾಗುತ್ತದೆ. ಮೇಲಾಗಿ ಇದು ಪ್ರತ್ಯಕ್ಷದೈವಃ ಪರದೈವ ಸಾಧಕಯಂತ್ರ. ಭಗವಂತ ಭಕ್ತರ ಮಧ್ಯವರ್ತಿಯಾಗಿದ್ದ ಪುರೋಹಿತನನ್ನು ತಳ್ಳಿ ಇದು ಬರುತ್ತದೆ.

ಆದರೂ ಯಾವೊಬ್ಬ ವ್ಯಕ್ತಿಯ ಉದ್ಧಾರವೂ ಬರಿ ಲಾಂಛನಮಾತ್ರದಿಂದಲೇ ಆಗುವುದಿಲ್ಲ. ಆ ಲಾಂಛನದ ಕೂಡ ಹೊಸ ಬಾಳು ಮೂಡಬೇಕು. ಹಾಗೆ ಹೊಸ ಬಾಳು ಮೂಡಿಬರಲು ಹೊಸ ಮೌಲ್ಯಗಳು ಕಣ್ಣೆದುರಿಗಿರಬೇಕು. ಇದಕ್ಕೆ ಒಪ್ಪುವಂತೆ ಬಸವಣ್ಣನವರು ಹೊಸ ಮೌಲ್ಯಗಳ್ನು ಕಾಣತೊಡಗಿದರು. ಅವರು ಕಂಡ ಮುಕ್ಕಾಲು ಪಾಲೆಲ್ಲ ಮೌಲ್ಯಗಳು ಈ ಸಾಮಾನ್ಯನ ಉದ್ಧಾರಕ್ಕೆ ಒಪ್ಪಂದವಾಗಿಯೇ ಇವೆ.

ಮೊದಲು ಸಾಮಾನ್ಯರನ್ನೆಲ್ಲ ಶಿವದೀಕ್ಷೆ ಲಿಂಗಲಾಂಛನಗಳ ಮೂಲಕವಾಗಿಯೆ ಸುಲಭವಾಗಿ ಮೇಲೆತ್ತಬಹುದೆಂಬ ಕನಸು ಬಸವಣ್ಣನವರಿಗಾಗಿದ್ದಿರಬೇಕು. ಆದರ್ಶ ಮತ್ತು ಮಹದಾಶಯಗಳ ಆವೇಶದಲ್ಲಿ, ಹಾಗೂ ತಾರುಣ್ಯದ ಅದಮ್ಯ ಉತ್ಸಾಹ-ಲೌಕಿಕಾನುಭವ ಅಭಾವಗಳಿಂದಾಗಿ ಎಂತಹ ಮಹಾಪಾಪಿಯನ್ನೂ ಲಿಂಗಲಾಂಛನದಿಂದಲೇ ರಕ್ಷಿಸಬಲ್ಲೆ ಎಂಬ ವಿಶ್ವಾಸವಿರುತ್ತದೆ. ಒಂದು ಕೈಯಲ್ಲಿ ಖಡ್ಗ ಮತ್ತೊಂದು ಕೈಯಲ್ಲಿ ಸುರೆ, ಬಾಯಲ್ಲಿ ಮಾಂಸವಿದ್ದೂ ಲಿಂಗಲಾಂಛನವಿದ್ದವನನ್ನು ಸಾಕ್ಷಾತ್ ಶಿವನೆನ್ನುವೆ ಎಂದು ಉತ್ಸಾಹ ತಾಳುತ್ತಾರೆ. ಇದನ್ನು ಇಷ್ಟು ಸುಲಭ ಉದ್ಧಾರ ಮಾರ್ಗವನ್ನು ಒಪ್ಪಿ ಅನೇಕರು ನುಗ್ಗಿ ಬರುತ್ತಾರೆ. ದಿನ ಕಳೆಯುತ್ತದೆ, ಆಗ ಬಸವಣ್ಣನವರಿಗೆ ಹೊಳೆಯುತ್ತದೆ, ಬಲೆಯಲ್ಲಿ ಬಿದ್ದಿದ್ದ ಮೃಗವನ್ನು ಬಿಡಿಸಿಟ್ಟರೆ ಅದು ಖೆಡ್ಡದಲ್ಲಿ ಬೀಳುವ ಅಪಾಯವೊದಗಬಹುದೆಂದು. ಪರುಷ ಮುಟ್ಟಿದ ಕೋಡಗವೇನೋ ಚಿನ್ನದ್ದಾಯಿತು. ಆದರೆ ಕೋತಿಯಾಗಿಯೇ ಉಳಿಯಿತು. ಲಿಂಗಮುಟ್ಟದ ಅಳಿಮನದವ ಸಂಪಿಗೆಯ ಅರಳಲ್ಲಿ ಪೂಜಿಸಿದ ಸಗಳಿಯ ಬೆನಕನಂತೆ, ಬರಿಯ ರಂಜನೆಯಷ್ಟೆ. ಆದರೆ ಅದರ ಗಂಜಳ ಹೋಗಲಿಲ್ಲವಲ್ಲ? ಆದ್ದರಿಂದಲೇ ಲಾಂಛನದಿಂದ ಮಾತ್ರವೇ ಸಾಧ್ಯವಾಗದ ಸಾಧನೆಯಿಂದಲೇ ಲಭ್ಯವಾಗುವ ಮೌಲ್ಯಗಳನ್ನು ಕಂಡುಕೊಳ್ಳುತ್ತಾರೆ. ಅಂದರೆ ಲಾಂಚನದ ಬೆಲೆಯನ್ನು ಈಷತ್ತಾದರೂ ಅಲ್ಲಗಳೆದರೆಂದಲ್ಲ. ಅಥವಾ, ಸಾಮಾನ್ಯರಿಗಿನ್ನು ಉದ್ಧಾರವೇ ಇಲ್ಲ ಎಂದು ಭಾವಿಸಿದರೆಂದೂ ಅಲ್ಲ. ಲಾಂಛನಕ್ಕೂ ಶಿವಶಕ್ತಿ ಉಂಟು, ಸಾಮಾನ್ಯನಿಗೂ ಶಿವತತ್ವ ಲಾಭ ಉಂಟು. ಆದರೆ ಉದ್ಧಾರಕ್ಕೆ ತನ್ನನ್ನು ತಾನು ವ್ಯಕ್ತಿ ತೆರೆದುಕೊಳ್ಳಬೇಕಷ್ಟೇ. ಇಲ್ಲದಿದ್ದರೆ ದೀಕ್ಷೆ ರಕ್ಷೆಯಾಗುವ ಬದಲು ಶಿಕ್ಷೆಯಾಗಲೂ ಬಹುದು. ಅದು ಆಗದಂತೆ ಆಗಲು ಸಾಮಾನ್ಯನು ದೀಕ್ಷಾವಂತ ಮೌಲ್ಯವಂತನಾಗಬೇಕು. ಇಂಥ ಮೌಲ್ಯಗಳನ್ನು ಕಂಡರು.

ಕುಲಜ ಯಾರು, ಯಾರಲ್ಲ ಎಂಬ ಬಗ್ಗೆ, ಹೊಲೆಯ ಯಾರು? ಯಾರು ಉತ್ತಮ? ಎಂಬ ಬಗ್ಗೆ : ಭಗವಂತನ ಸೃಷ್ಟಿಯಲ್ಲಿ ಹೇಗೆ ಕುಲ ಸಹಜವಲ್ಲ ಎಂಬ ಬಗ್ಗೆ ; ಭವಿ-ಶರಣ ಯಾರೆಂಬ ಬಗೆಗೆ, ಅಂತರಂಗ ಬಹಿರಂಗ ಶುದ್ಧಿಗೆ ಏನೆಂಥ ಮೌಲ್ಯಮಾಂಗಲ್ಯ ಪೂಜೆ ಮಾಡಬೇಕೆಂಬ ಬಗೆಗೆ ಬಸವಣ್ಣ ಚಿಂತಿಸುತ್ತಾರೆ. "ಕೊಲುವವನೆ ಮಾದಿಗ, ಹೊಲಸ

ತಿಂಬವನೇ ಹೊಲೆಯ, ಕುಲವೇನೊ? ಆವಂದಿರ ಕುಲವೇನೊ? ಸಕಲಜೀವಾತ್ಮರಿಗೂ ಲೇಸನೆ ಬಯಸುವಾತ ನಮ್ಮ ಕೂಡಲ ಸಂಗಮನೇ ಕುಲಜ" ಎಂದೇ ಹೇಳಿ, ಆಹಾರಾದಿಗಳಿಂದ ಶುದ್ಧೀಕರಣ ಮಾಡತೊಡಗುತ್ತಾರೆ. ಮದ್ಯ-ಮಾಂಸ, ಪ್ರಮತ್ತತೆ-ಹಿಂಸೆ ಹೊಲೆಯನನ್ನು ಹೊಲೆಯನನ್ನಾಗಿಯೇ ಇಟ್ಟಿರುವ ಸಾಮರ್ಥ್ಯವುಳ್ಳ ಭಯಂಕರ ಪುರೋಹಿತ ಶಕ್ತಿಗಳು. ಅವುಗಳಿಂದ ಸಾಮಾನ್ಯನ ಬಿಡುಗಡೆ ಆಗಬೇಕು. ಸಕಲ ಜೀವಕ್ಕೆ ಲೇಸು ಬಯಸುವವರೆಲ್ಲ ಶಿವಕುಲಜರು; ಆದ್ದರಿಂದ ಕೊಲೆ-ಹಿಂಸೆ ಸಾಧುವಲ್ಲ. ಅಹಿಂಸೆಯ ತತ್ವವನ್ನು ಬಸವಣ್ಣನವರು ಪಟ್ಟಾಗಿ ಹಿಡಿಯಲು ಇದು ತಮಿಳುನಾಡಿನ ಶೈವಧರ್ಮದ ಪ್ರಧಾನ ಮಂತ್ರವೇನೂ ಆಗಿಲ್ಲದಿದ್ದರೂ ಇವರು ದೃಢವಾಗಿ ಇದನ್ನು ಎತ್ತಿ ಹಿಡಿಯಲು ಆ ಕಾಲದಲ್ಲಾಗಲೇ ಪ್ರಭಾವ ಬೀರಿದ್ದ ಜೈನಧರ್ಮ ತನ್ನ ಪ್ರಪ್ರಮುಖ ಮಂತ್ರವಾಗಿ ಅಹಿಂಸೆಯನ್ನು ಸಾರಿದ್ದುದೂ ಆಗಿತ್ತು. ಮೇಲಾಗಿ ಬಸವಣ್ಣನವರು ಸಹಜವಾಗಿಯೆ ದಯಾರ್ದ್ರ ಮನೋಧರ್ಮ. ಮತ್ತೆ ಹಿಂಸೆಯ ಆವರಣದಲ್ಲೆ ಇರಿಸಿಯೂ ಯಾವೊಬ್ಬನನ್ನೂ ಮೇಲೆತ್ತುವುದು ಕಷ್ಟವೆಂಬ ಅರಿವಿತ್ತು. ಜಾತಿಯಿಂದ ಹೊಲೆಯನಾದವನು, ನೀತಿಯಿಂದ ಹೊಲೆಯನೆ ಆಗಬಾರದಲ್ಲ. ಹಾಗಾದುದು, ಯಾವ ಸಂಪ್ರದಾಯಸ್ಥ ಹೀಗಳೆದರೂ, ಹೊಲಬಿಗನಾದ ಹೊಲೆಯ ಉತ್ತಮನೇ ಆಗುತ್ತಾನೆ. ಆಗ ಉತ್ತಮನೂ ಅಂಥವನನ್ನು ಉಗ್ರವಾಗಿ ಪ್ರತಿರೋಧಿಸಲಾರ. ಆದ್ದರಿಂದ ಬಸವಣ್ಣನವರು ಹೊಲಬಿಗನಾಗುವ ಕರೆ ನೀಡುತ್ತಾರೆ. ಹುಟ್ಟು ಹೊಲೆಯನಿಗೆ;

**ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲಿಪ್ಪುದು ಲೇಸು**
**ಕಂಡಯ್ಯಾ !**
**ಹೊಲಬುಗೆಡದೆ ಲಿಂಗಶರಣೆನ್ನಿರಯ್ಯಾ !**
**ಹೊಲಬುಗೆಡದೆ, ಶಿವಶರಣೆನ್ನಿರಯ್ಯಾ !**
**ನಮ್ಮ ಕೂಡಲ ಸಂಗನ ಮಹಾಮನೆಯೊಳು ಮಾದಾರ ಚೆನ್ನಯ್ಯ**
**ಹೊಲಬಿಗನಯ್ಯ !**

ಮಾದಾರ ಚೆನ್ನಯ್ಯ ಹೊಲಬಿಗನಾದ; ಶಿವನ ಮಗನಾದ. ಹಾಗಿರುವಾಗ ಜಾತಿಯೆಲ್ಲಿ ಬಂತು? ಆದರೂ ಹೊಲಬಿಗನಾಗದೆ ಯಾರೂ, ಉತ್ತಮನೂ, ಶಿವನ ಮಹಾಮನೆಯಲ್ಲಿ ಎಡಗಾಣ. ಇಷ್ಟಾದರೂ, ಸಂಪ್ರದಾಯಸ್ಥ ಜಾತಿಭೇದಗಳನ್ನು ಬೌದ್ಧಿಕವಾಗಿಯಾದರೂ ಬಿಟ್ಟು ಬದುಕಲಾರ. ಆಗ ಬಸವಣ್ಣನವರು ನಮ್ಮ ಕುರುಡು ಕಣ್ಮರುವಂತಹ ಹೊಸ ಬೆಲೆಯೊಂದನ್ನು ನೀಡುತ್ತಾರೆ;

**ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ !**
**ಜಲವೊಂದೆ ಶೌಚಾಚಮನಕ್ಕೆ !**
**ಕುಲವೊಂದೆ ತನ್ನ ತಾನರಿದವಂಗೆ !**
**ಫಲವೊಂದೆ ಷಡುದರುಶನ ಮುಕ್ತಿಗೆ**
**ನಿಲವೊಂದೆ ಕೂಡಲಸಂಗಮದೇವಾ, ನಿಮ್ಮನರಿದವಂಗೆ**

ನಿರುದ್ವಿಗ್ನರಾಗಿ ಅಣ್ಣ ಈ ದರ್ಶನವನ್ನು ಸಾರುತ್ತಾರೆ. ಅದೇ ನೆಲ, ಅದೇ ಜಲ ಅವಕ್ಕೆ ಬೇರೆ ಬೇರೆ ಬೆಲೆ ಬಂತು. ಅರಿಯುವತನಕ ಬೇರೆ ಬೇರೆ, ಅರಿತರೆ ಒಂದೇ ನಿಲುವು. ಆದರೆ ಅಂಬಿಗರ ಚೌಡಯ್ಯನಂಥವರು ಇಷ್ಟು ಮೃದುವಾಗಿ ಹೇಳಿ ಜಾತಿವಾದಿಗಳನ್ನು ಎದುರಿಸುವುದು ಸುಲಭವೆಂದು ನಂಬಲಿಲ್ಲ. ಅವನ ಮಾತನ್ನಿಲ್ಲಿ ಕೇಳಬಹುದು ;

**ನೇಮಸ್ತನೆಂಬುವ ಕ್ರೂರಕರ್ಮಿ !**
**ಶೀಲವಂತನೆಂಬುವ ಸಂದೇಹಿ !**
**ಭಾಷೆವಂತನೆಂಬುವ ಬ್ರಹ್ಮೇತಿಕಾರ !!**
**ಇವರು ಮೂವರು ಕುಳ್ಳಿರ್ದಲ್ಲಿ ಕುಳ್ಳಿರಲಾಗದು !**
**ಇವರು ಹೋದ ಬಟ್ಟೆಯ ಹೋಗಲಾಗದು !**
**ಇವರು ಮೂವರಿಗು ಗುರುವಿಲ್ಲ ಲಿಂಗವಿಲ್ಲೆಂದಾತನಂಬಿಗರ**
**ಚೌಡಯ್ಯ !**

ಲಿಂಗದೀಕ್ಷೆ ತೆಗೆದುಕೊಂಡೂ ಹಳೆಯ ಜಾತಿ ಭೇದವನ್ನಿನ್ನೂ ಕಳೆದುಕೊಂಡಿಲ್ಲದವರು. ತಮ್ಮ ಹಿಂದಿನ ಜಾತಿಕ್ರಮಾನು ಗುಣ್ಯವನ್ನು ನೆನೆದು ತಮ್ಮ ಜೊತೆಯ ಶಿವಭಕ್ತನೊಬ್ಬ ಎಂದೆಲ್ಲ ಭಾವಿಸಿರಬೇಕು. ಆಗ ಅಂಬಿಗರ ಚೌಡಯ್ಯ ಕೊಡಲಿಗೊರವನಾಗಿ ಮೇಲೆ ಬರುವಂಥ ಉಪಕರಣಗಳಲ್ಲಿ ನಾನು ನೇಮಸ್ತ, ಶೀಲವಂತ ಎಂಬಿತ್ಯಾದಿ ಸೂಕ್ಷ್ಮಪ್ರತಿಷ್ಠೆಗಳು ಪ್ರಮುಖ. ಆ ಪ್ರತಿಷ್ಠೆಗಳಿಗೆ ಏಟುಬಿದ್ದರೆ, ಆ ಪ್ರತಿಷ್ಠಾ ಪ್ರಿಯರನ್ನೇ ಹೊರಕ್ಕಟ್ಟಿದರೆ ಸಮಸ್ಯೆಯೇ ಇಲ್ಲ ಎಂಬುದು ಚೌಡಯ್ಯನ ದೃಷ್ಟಿ. ಆದರೆ ಬಸವಣ್ಣನವರು ಅಷ್ಟು ಉದ್ದಾಮತೆಯನ್ನು ಪ್ರಕಟಿಸ ಬರುವುದಿಲ್ಲ. ಎಲ್ಲ ಘಳಿಗೆಯಲ್ಲೂ. ಅದರಿಂದ ಅವರು ಹೀಗೆನ್ನುತ್ತಾರೆ ;

**ಹಾಲ ನೇಮ, ಹಾಲ ಕೆನೆಯ ನೇಮ !**
**ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ, ಬೆಣ್ಣೆಯ ನೇಮ ಬೆಲ್ಲದ**
**ನೇಮ !**
**ಅಂಬಲಿಯ ನೇಮದವರನಾರನೂ ಕಾಣೆ !**
**ಕೂಡಲ ಸಂಗನ ಶರಣರಲ್ಲಿ ಅಂಬಲಿಯ ನೇಮದಾತ ಮಾದಾರ**
**ಚೆನ್ನಯ್ಯ !**

ಎಂತ ಸೂಕ್ಷ್ಮ ವಿಶ್ಲೇಷಣ ! ಎಂತಹ ಅಭಿವ್ಯಕ್ತಿ ! ಎಲ್ಲರೂ





ನೇಮ-ವ್ರತ ಮಾಡುವವರೆ, ಆದರೆ, ಆ ಎಲ್ಲ ವ್ರತಗಳೂ ಪ್ರತಿಷ್ಠೆಯ ಪ್ರದರ್ಶನಕ್ಕೆ; ತಾವು ಶ್ರೀಮಂತರು ಉತ್ತಮರು ಎಂದು ತೋರಲು ಮಾತ್ರವೆ ! ಹಾಲನೇಮ, ಹಾಲಕೆನೆಯ ನೇಮ ಇತ್ಯಾದಿ, ಎಲ್ಲವೂ ಅಷ್ಟೆ ! ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಹಿಂದೆ ಮೇಲುಕೀಳೆಂಬುದನ್ನು ನಿರ್ಧರಿಸುವಲ್ಲಿ ಆರ್ಥಿಕ ವ್ಯವಸ್ಥೆಯೂ - ಆಹಾರಕ್ರಮವೂ ಗೌಣವಲ್ಲದ ಪಾತ್ರ ವಹಿಸಿದ್ದವು. ಉತ್ತಮ ರಾಗಿಯ ಅಂಬಲಿ ಮುಟ್ಟುತ್ತಲೂ ಇರಲಿಲ್ಲ. ವ್ರತನೇಮಕ್ಕೆ ಅದನ್ನು ಬಳಸುತ್ತಲೂ ಇರಲಿಲ್ಲ. ಬಡವ-ಹೊಲೆಯ-ಅಂಬಲಿಯನ್ನೆ ಹಾಲಕೆನೆಗಿಂತ ಪ್ರೀತಿಯಿಂದ ಕಾಣಬೇಕು. (ಇಷ್ಟೇ ಅಲ್ಲ. ಇಂತಿಂಥ ಆಹಾರಗಳಿಂದ ಇಂತಿಂಥ ಜಾತಿಗಳನ್ನೇ ಗುರುತಿಸಬಹುದು; ಆಯಾ ಜಾತಿಯವರನ್ನು ಬೈಯಬೇಕಾದರೆ ಆಯಾ ಆಹಾರ ವಿಶೇಷಗಳನ್ನಷ್ಟೆ ಅಲ್ಲಗಳೆದರೆ ಸಾಕು. ಇಂಗು, ಬೆಳ್ಳುಳ್ಳಿ, ನೀರುಳ್ಳಿ, ಹಾಲು-ಎಮ್ಮೆ ಹಾಲು, ಹಸುವಿನ ಹಾಲು-ಬೆಣ್ಣೆ, ಮೊಸರು ಮಜ್ಜಿಗೆ, ಕುಂಬಳಕಾಯಿ, ರಾಗಿ, ಅಕ್ಕಿ, ಜೋಳ ಈ ಎಲ್ಲವೂ ಜಾತಿಯ ವರ್ಗೀಕರಣದಲ್ಲಿ ನೆರವಾಗಿವೆ. ಕನಕದಾಸರು ಈ ಸೂಕ್ಷ್ಮವನ್ನು ತಿಳಿದೆ ಉತ್ತಮ ವರ್ಗದವರನ್ನು ಅಕ್ಕಿಯಾಗಿ ಸಂಕೇತಿಸಿ, ಸಾಮಾನ್ಯರನ್ನು ರಾಗಿಯಾಗಿಸಿ (ಆರ್ಥಿಕವಾಗಿ ಇದು ಸಂಕೇತವೇನೂ ಅಲ್ಲ. ವಾಕ್ಯಾರ್ಥವೆ ಆಗಿದೆ) ತಮ್ಮ ವಿಡಂಬನಕಾವ್ಯ ರಚಿಸಿದ್ದಾರೆ) ಬಸವಣ್ಣವರಿಗೆ ಈ ವರ್ಗಭೇದ ಒಡೆಯುವ ಆಸೆ. ಅಕ್ಕಿಗೆ ಬೆಲೆ ಕಳೆಯುವುದಲ್ಲ. ರಾಗಿ ಅಂಬಲಿಗೆ ಬೆಲೆ ನೀಡುವ ಬಯಕೆ. ಅದಕ್ಕೆ ಮಾದಾರ ಚೆನ್ನಯ್ಯನೆ ಬೆಲೆತಂದ ಮೇಲೆ ಅವರಿಗೆ ಇದು ಸುಲಭವೆ ಆಯಿತು.

ಹೀಗೆ ನೇಮವನ್ನೂ ಸಾಮಾನ್ಯನ ದೃಷ್ಟಿಯಲ್ಲೆ ನಿರ್ಧರಿಸುವ ಕೆಚ್ಚನ್ನು ಮಾಡುತ್ತಾರೆ. ಅದರ ಜೊತೆಗೆ ನೇಮದ ಬಗೆಗೆ ಮತ್ತೂ ಒಂದು ಹೊಸ ಬೆಲೆಯನ್ನು ಕೊಡುತ್ತಾರೆ ;

**ಬಂದುದ ಕೈಕೊಳ್ಳಬಲ್ಲಡೆ ನೇಮ,**
**ಇದ್ದುದ ವಂಚನೆಯ ಮಾಡದಿದ್ದಡೆ ಅದು ನೇಮ !**
**ನಡೆದು ತಪ್ಪದಿದ್ದಡೆ ನೇಮ, ನುಡಿದು ಹುಸಿಯದಿದ್ದಡೆ ನೇಮ !**
**ನಮ್ಮ ಕೂಡಲಸಂಗನ ಶರಣರು ಬಂದಡೆ ಒಡೆಯರಿಗೊಡವೆಯ**
**ನೊಪ್ಪಿಸುವುದೆ ನೇಮ !**

ನೇಮಕ್ಕೆ ಹಾಲಕೆನೆಯ ಬೇಕೆನ್ನುವಂತೆ, ಭಗವಂತ ಕೃಪೆ ಮಾಡುವುದಾದರೆ ಹಾಲು ಬೆಣ್ಣೆಗಳಾಗಿಯೆ ಅವನು ಪ್ರತ್ಯಕ್ಷವಾಗಿ ಬರಬೇಕೆಂದೂ ತಿಳಿದಿರುತ್ತೇವೆ. ಆದರೆ ಅದು ವ್ರತಹೀನತೆ. ಬಂದುದನ್ನೆಲ್ಲ ಕೈಗೊಳ್ಳುವ ಧೈರ್ಯ ಬೇಕೆನ್ನುತ್ತಾರೆ. ಬೇಡಿ ಪಡೆಯುವುದು, ಬೇಕಾದದ್ದನ್ನು ಮಾತ್ರ ಪಡೆಯುವುದು ಭಕ್ತನನ್ನು ದೀನನ್ನಾಗಿ, ದುರ್ಬಲನನ್ನಾಗಿ, ವ್ಯಾಪಾರಿಯನ್ನಾಗಿ ಮಾಡುತ್ತದೆ. ಅದು ಕೂಡದು. ಅದರ ಜತೆಗೆ ಅಸಂಗ್ರಹ ಭಾವಬೇಕು. ಶರಣರು ಏನನ್ನೂ ಕೊಡಕೂಡದು. ಬಂದುದನ್ನು ಶಿವಶರಣರಿಗೆ ನೀಡುವುದು ನೇಮ. ಇದು ಅಣ್ಣನವರ ಆಧ್ಯಾತ್ಮಿಕ ಸಮತಾವಾದದ ಪೀಠಿಕೆ. ಇದನ್ನು ಮುಂದೆ ವಿವರಿಸುವೆ.

ಬಸವಣ್ಣನವರು ಜಾತಿಗೆ ಸಂಬಂಧಪಟ್ಟಂತೆ ಪುನರ್ ಮೌಲ್ಯ ಮಾಡಬೇಕಾಗಿ ಬಂದದ್ದು ಅಗಾಧ. ಆ ಎಲ್ಲೆಡೆಯೂ ಅವರು, ಖಚಿತವಾಗಿ, ನಿರ್ಭೀತವಾಗಿ ಇದ್ದಾರೆ. ಇಂತ ಇಂಥ ಜಾತಿಯವನು ಇದೇ ವೃತ್ತಿ ಮಾಡಬೇಕು. ಈ ವೃತ್ತಿಯವನು ಇದೇ ಜಾತಿಗೆ ಸೇರಿರಬೇಕೆಂಬುದು ಬಹು ಪ್ರಾಚೀನ ಕಾಲದಿಂದ ಬಂದ ವ್ಯವಸ್ಥೆ. ಈ ವ್ಯವಸ್ಥೆಯ ಯಾವ ಕೀಲನ್ನು ಭಾಗಶಃ ತಿದ್ದ ಹೋದರೂ ಅಪಾಯ. ಆದ್ದರಿಂದ ಬಸವಣ್ಣನವರು ಆಮೂಲಾಗ್ರ ಪರಿವರ್ತನವನ್ನೆ ಮಾಡಹೋಗುತ್ತಾರೆ. ಅವರ ದೃಷ್ಟಿಯಲ್ಲಿ ಜಾತಿವೃತ್ತಿಯೆ ಸ್ವಧರ್ಮವಲ್ಲ ಹಾಗೂ ಜಾತಿಯಿಂದ ವೃತ್ತಿಯಲ್ಲ, ವೃತ್ತಿಯಿಂದ ಜಾತಿ ಬಂತು. ಆದ್ದರಿಂದ ಅದು ಚಿರವಾಗಿ ಇರಬೇಕಾದುದೂ ಅಲ್ಲ. ಹಾಗೂ ಯಾವ ಜಾತಿಯೂ ಯಾವ ಇತರ ಜಾತಿಗಿಂತಲೂ ಮೇಲಲ್ಲ-ಕೀಳಲ್ಲ. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ."

**ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,**
**ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ !**
**ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ !**
**ಇದು ಕಾರಣ, ಕೂಡಲ ಸಂಗಮದೇವಾ ಅಂಗಸ್ಥಲವನರಿದವನೆ**
**ಕುಲಜನು !**

ಇದು ಅತ್ಯಾಧುನಿಕ, ಸಂಪ್ರದಾಯ ವಿರೋಧಿ ದೃಷ್ಟಿ. ಲಿಂಗಸ್ಥಲ ಎಷ್ಟು ಮುಖ್ಯವೋ ಈ ಅಂಗಸ್ಥಳವೂ ಅಷ್ಟೇ ಮುಕ್ಯ. ಅದು ಬೇರೆ ಇದು ಬೇರೆ ಅಲ್ಲ. ಇಷ್ಟಾದರೂ ಯಾರಾದರೂ ಜಾತಿಯನ್ನು ಎತ್ತುತ್ತಲೇ ಇದ್ದರೆ ಆಗ ಅವರ ಸಹನೆ ಮೀರುತ್ತದೆ. ಜಾತಿಪ್ರತಿಷ್ಠಿತರ ಮೂಲಕ್ಕೆ ಕೊಡಲಿ ಎತ್ತುತ್ತಾರೆ ಕಡೆಗೆ ;

**ಹೊಲೆಯೊಳಗೆ ಹುಟ್ಟಿ ಕುಲವನರಸುವ**
**ಎಲವೋ, ಮಾತಂಗಿಯ ಮಗ ನೀನು !**
**ಸತ್ತುದನೆಳೆವನೆತ್ತಣ ಹೊಲೆಯ !**
**ಹೊತ್ತು ತಂದು ನೀವು ಕೊಲುವಿರಿ !**
**ಶಾಸ್ತ್ರವೆಂಬುದು ಹೋತಿಂಗೆ ಮಾರಿ**
**ವೇದವನೆಂಬುದು ನಿಮಗೆ ತಿಳಿಯದು !**

ನಮ್ಮ ಕೂಡಲಸಂಗನ ಶರಣರು
ಕರ್ಮವಿರಹಿತರು, ಶರಣ ಸನ್ನಿಹಿತರು
ಅನುಪಮಚರಿತ್ರರು
ಅವರಿಗೆ ತೋರಲು ಪ್ರತಿಯಿಲ್ಲವೋ !

ವ್ಯಾಸ ಬೋಯಿತಿಯ ಮಗ ! ಮಾರ್ಕಂಡೇಯ ಮಾತಂಗಿಯ ಮಗ ! ಮಂಡೋದರಿ ಕಪ್ಪೆಯ ಮಗಳು ! ಕುಲವನರಸದಿರಿಂ ಬೋ ! ಕುಲದಿಂ ಮುನ್ನೇನಾದಿರಿಂ ಭೋ!

**ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮಚ್ಚಿಗ !**
**ಕಶ್ಯಪ ಕಮ್ಮಾರ, ಕೌಂಡಿಲನೆಂಬ ಋಷಿ**
**ಮೂರು ಭುವನವರಿಯೆ ನಾನಿದ ಕಾಣೆಂ ಬೋ !**
**ನಮ್ಮ ಕೂಡಲಸಂಗನ ವಚನವಿಂತೆಂದುದು**
**'ಶ್ವಪಚೋಪಿ' ಯಾದಡೇನು, ಶಿವಭಕ್ತನೆ ಕುಲಜನು !**

ಇದಕ್ಕೆಲ್ಲ ಬಸವಣ್ಣನವರಿಗೆ ಎಲ್ಲಿ ಮಾಹಿತಿ ದೊರಕಿತೊ ತಿಳಿಯದು, ಅಂತೂ ಪ್ರಾಚೀನ ಋಷಿವಂಶದವರೆಂದು ನಮ್ಮ ಜಾತಿ ಉತ್ತಮಿಕೆಯನ್ನು ಕೊಚ್ಚಿಕೊಳ್ಳುವವರಿಗೆ ಇದು ಕುಠಾರಪ್ರಹಾರ. ಹಿಂದೆ, ಆ ಸಾಮಾನ್ಯರು ಋಷಿಗಳಾಗಿ ಪರಿಣಾಮಗೊಳ್ಳುವುದೂ ಸಾಧ್ಯವಾಗಿದ್ದ ಮೇಲೆ ಜಾತಿಯ ಕಟ್ಟೇಕೆ ಬಿಗಿಯಿತು? ಅದಕ್ಕೇ ಋಷಿಮೂಲ ಪರೀಕ್ಷೆ ಬೇಡ ಎಂದುದು. ಅಣ್ಣನವರು ಇಲ್ಲಿ ಆ ಮೂಲ ಶೋಧನವನ್ನೇ ಮಾಡಿ, ಆ ಋಷಿಗಳ ಋಷಿತ್ವವನ್ನೂ ಕಿಂಚಿತ್ತೂ ಇಳಿಸದೆ, ಆ ಋಷಿವಂಶಸ್ಥರೆಂದು ಉದ್ಘೋಷಿಸುವ ಜಾತಿ ಭ್ರಮಿತರಿಗೆ ಬೆಲೆ ಇಳಿಸಿದ್ದಾರೆ. ಪೂರ್ವಜರ ಬಡ್ಡಿಯೆಂದರೆ ಬದುಕುವ ಕುಲ ಶ್ರೀಮಂತ ವರ್ಗದ ಬೆಲೆಗಳೆಯುವುದರಲ್ಲಿ ಯಾವ ಅಳುಕನ್ನೂ ತೋರಿಸುವುದಿಲ್ಲ. ಪ್ರಾಯಶಃ ಬಸವಣ್ಣನವರ ಕಾಲದಲ್ಲೂ ವೈದಿಕಾಚಾರಗಳು ಅರ್ಥಹೀನ ಕಂದಾಚಾರಗಳಾಗ ತೊಡಗಿದ್ದವೋ ಏನೊ. ತೊರೆಮೀಯುವುದು, ಮರಸುತ್ತುವುದು, ಆದರೆ ಒಳಗು ಡಿಳ್ಳಾಗಿರುವುದು; ಬೆಂಕಿ ಪೂಜಿಸುವುದು, ಆದರೆ ಅದೇ ಬೆಂಕಿಯಿಂದ ಮನೆ ಹೊತ್ತಿಕೊಂಡರೆ ಕೊಚ್ಚೆನೀರು ಹಾಕಿ ಆರಿಸುವುದು - ಈ ಎಲ್ಲ ಅವರ ಕಾಲದಲ್ಲಿದ್ದುದರಿಂದಲೇ ಅವರಿಗೆ ಜಾತಿಪ್ರತಿಷ್ಠಿತ ವೈದಿಕರನ್ನು ಖಂಡಿಸಲು ಅನುವಾಗುತ್ತದೆ. ಈ ಯಾವ ವರ್ಗ ಪ್ರತಿಷ್ಠೆಯೂ ಇಲ್ಲದೆ, ಹಾಲನೇಮ-ಕೆನೆಯನೇಮಗಳ್ಯಾವುದನ್ನೂ ಮಾಡದೆ, ಹೊಳೆ ಮೀಯದೆ, ನೇಣು ಬಿಗಿದುಕೊಳ್ಳದೆ ಒಬ್ಬ ಶರಣಾಗಬಲ್ಲ ಎಂಬುದೆ ಅವರ ವಾದ.

**ನಿಮ್ಮರಿಯದ ಕಾರಣ ಕೈಯಲ್ಲಿ ಹುಲ್ಲು !**
**ನಿಮಗೆರಗದ ಕಾರಣ ಕೊರಳಲ್ಲಿ ನೇಣು !**
**ಹಿಂಡಲೇಕೋ? ತೊಳೆಯಲೇಕೋ?**
**ಮುಳುಗಿ ಮುಳುಗಿ ಮೂಗ ಹಿಡಿಯಬೇಕೋ?**
**ಕೂಡಲ ಸಂಗನ ಶರಣರಲ್ಲಿ ಡೋಹರ ಕಕ್ಕಯ್ಯನಾವ ತೊರೆಯಲ್ಲಿ ಮಿಂದ?**

ವೈದಿಕರ ಕರ್ಮಕಾಂಡವೆಲ್ಲ ಅವರಿಗೆ ಭಕ್ತಿಯ ಅಭಾವವನ್ನೆ ಎತ್ತಿ ತೋರಿಸುತ್ತದೆ. ಭಕ್ತಿಗೆ, ಆದ್ದರಿಂದ, ಈ ಯಾರ ಕಲ್ಪಗಳೂ ಅನಗತ್ಯ. ಡೋಹರ ಕಕ್ಕಯ್ಯನೇ ಅದಕ್ಕೆ ಆಧಾರ.

ಹಲವಾರು ಹಳೆಯ ಜಾತಿಗಳಿಂದ ಬಂದು ಶಿವದೀಕ್ಷೆಯನ್ನು ತೆಗೆದುಕೊಂಡವರೆಲ್ಲರೂ ಒಂದೆ ಕ್ಷಣದಲ್ಲಿ ತಮ್ಮ ಹಳೆಯ ಆಚಾರಗಳನ್ನಾಗಲಿ, ಮಾಂಸಾದಿ ಆಹಾರ ಗಳನ್ನಾಗಲಿ, ಜಾತಿ ಜಿಜ್ಞಾಸೆಯನ್ನಾಗಲಿ ಬಿಟ್ಟುಬಿಟ್ಟರೆಂದೇನೂ ಅಲ್ಲ. ಅಷ್ಟು ಬೇಗ ಯಾವ ವ್ಯಕ್ತಿಯ ಸ್ವರೂಪವನ್ನು ಪರಿವರ್ತಿಸುವುದೂ ಸಾಧ್ಯವೇ ಇಲ್ಲ. ರೂಪಾಂತರವೇನೊ ಸುಲಭ, ಸ್ವರೂಪಾಂತರ ದುಸ್ಸಾಧ್ಯ. ಆದ್ದರಿಂದ ಬಸವಣ್ಣನವರು ಶರಣರ ಗಮನವನ್ನು ಅತ್ತಕಡೆ ತಿರುಗಿಸುತ್ತಾರೆ. ಕಬ್ಬಿಣದ ಕೋಡಗ ಚಿನ್ನದ ಕೋಡಗವಾದರೇನು; ಅದು ಆಂಜನೇಯತ್ವಕ್ಕೆ ಏರಬೇಕು ಎಂಬ ಕಲ್ಪನೆ ಮೂಡಿತು ಅವರಿಗೆ. ಅದರಿಂದ ಸಾಮಾನ್ಯ ಶರಣನನ್ನು ಸಾಧನೆಗೆ ಪ್ರೇರಿಸಿ ದಾರಿ ತಿದ್ದಿ ಮುನ್ನಟ್ಟುತ್ತಾರೆ, ಮುನ್ನಡೆಸುತ್ತಾರೆ. ಹೇಗೆ ಸಾಧನೆ ನಡೆಸುವುದು, ತಿಳಿಯೆನಲ್ಲ; ಭಕ್ತಿಯೆಂಬುದೇನೊ ಸುಲಭವೆಂದಿದ್ದೆವಲ್ಲ? ಸಹಸಾಧಕರು, ಇತರ ಭವಿಗಳು ನಾನಾ ಬಗೆಯಾಗಿ ಗೇಲಿ ಮಾಡುತ್ತಾರಲ್ಲ? ಎಂಬ ಶರಣನಿಗೆ;

**ಆಳಿಗೊಂಡಿಹರೆಂದು ಅಂಜಲದೇಕೆ?**
**ನಾಸ್ತಿಕವಾಡಿಹರೆಂದು ನಾಚಲದೇಕೆ?**
**ಆರಾದೊಡಾಗಲಿ ಶ್ರೀ ಮಹಾದೇವಂಗೆ ಶರಣೆನ್ನಿ !**
**ಏನೂ ಅರಿಯೆನೆಂದು ಮೌನಗೊಂಡಿರಬೇಡ ಕೂಡಲಸಂಗಮದೇವರ ಮುಂದೆ**
**'ದಂದಣ, ದತ್ತಣ' ಎನ್ನಿ!**

ದಮ್ಮಯ್ಯ ದತ್ತಯ್ಯ ಎಂದು ಬೇಡಿದರೆ ಶಿವ ಒಲಿದೆ ಒಲಿವ; ಇತರರು ಏನು ಬೇಕಾದರೂ ಆಡಿಕೊಳ್ಳಲಿ. ಒಂದು ವೇಳೆ, ನಾನು ನಾನಾ ದೌರ್ಬಲ್ಯಗಳಿಂದ ಕೂಡಿರುವೆ, ನನಗೆಲ್ಲಿ ಮೋಕ್ಷ ಎಂದೇನಾದರೂ ಭೀತಿಯಿದ್ದರೆ ಅದಕ್ಕೂ ಉತ್ತರವಿದೆ. ನಿನ್ನ ವಿಕಾರಗಳೆ ಶಿವಪ್ರಕಾಶದತ್ತ ಒಯ್ಯುವ ಮಾರ್ಗವಾಗುತ್ತದೆ ಎಂಬ ಆಶ್ವಾಸನೆ ಬರುತ್ತದೆ.

(ಮುಂದುವರಿಯುತ್ತದೆ.)





# ಬುದ್ಧಿಮಾಂದ್ಯತೆ ಬರಲು ಏನು ಕಾರಣ?

- ಡಾ. ಸಿ.ಆರ್. ಚಂದ್ರಶೇಖರ್,
ಮನೋವೈದ್ಯರು,
ರಾಷ್ಟ್ರೀಯ ಮಾನಸಿಕ ಮತ್ತು
ನರವಿಜ್ಞಾನ ಸಂಸ್ಥೆ (ನಿಮ್ಹಾನ್ಸ್)
ಬೆಂಗಳೂರು-೫೬೦ ೦೨೯

ಯಾವುದೇ ಕಾರಣದಿಂದ ಮಿದುಳು ಸರಿಯಾಗಿ ಬೆಳೆಯದೇ ಹೋದರೆ, ಯಾವುದೇ ರೀತಿಯಿಂದ ಮಿದುಳಿಗೆ ಪೆಟ್ಟುಬಿದ್ದು ಹಾನಿಯಾದರೆ, ಮಿದುಳಿನ ಸಾಮರ್ಥ್ಯ ಕಡಿಮೆಯಾಗಿ ಬುದ್ಧಿಮಾಂದ್ಯತೆ ಉಂಟಾಗುತ್ತದೆ. ದೋಷ ಪೂರ್ಣ ಮಿದುಳೇ ಬುದ್ಧಿಮಾಂದ್ಯತೆಗೆ ಕಾರಣ.

ಮಿದುಳು ಸರಿಯಾಗಿ ಬೆಳೆಯದಿರಲು ಅಥವಾ ಹಾನಿಗೀಡಾಗಲು ಕಾರಣಗಳು ಹಲವಾರು. ಅವನ್ನು ವಂಶಿಕ ಹಾಗೂ ವಾತಾವರಣದ ಕಾರಣಗಳು : ನಮ್ಮ ಶರೀರದ ಆಕಾರ, ಬಣ್ಣ, ನಮ್ಮ ಸ್ವಭಾವ ಇತ್ಯಾದಿ ಸ್ವಲ್ಪಮಟ್ಟಿಗೆ ವಂಶಿಕವಾಗಿ ತಂದೆ-ತಾಯಿಗಳಿಂದ ನಮಗೆ ಬರುತ್ತದೆ, ಸ್ವಲ್ಪಮಟ್ಟಿಗೆ ವಾತಾವರಣದಿಂದ ರೂಪಿಸಲ್ಪಡುತ್ತವೆ. ನಮ್ಮ ಜೀವಕೋಶದಲ್ಲಿರುವ ಬಣ್ಣದಂಡೆಗಳೆಂಬ ವಿಶೇಷ ವಸ್ತುಗಳು ತಂದೆ-ತಾಯಿಗಳಿಂದ ಮಗುವಿಗೆ ಈ ಎಲ್ಲ ವಿಶೇಷತೆಗಳನ್ನು ಸಾಗಿಸುತ್ತವೆ. ಒಂದೊಂದು ವಿಶೇಷತೆಗೂ ಒಂದು ಅಥವಾ ಅನೇಕ ಗುಣವಾಹಿನಿಗಳು ಇರಬಹುದು. ಇನ್ನೂ ಅಗೋಚರವಾದ ಕೆಲವು ಕಾರಣಗಳಿಂದ ಬುದ್ಧಿಮಾಂದ್ಯತೆ ಬರಬಹುದು. ಅಂದರೆ ಭ್ರೂಣಸ್ಥಿತಿಯಲ್ಲೇ, ಬುದ್ಧಿಮಾಂದ್ಯತೆಗೆ ಬೀಜಾಂಕುರವಾಗುತ್ತದೆ.

ತಂದೆ-ತಾಯಿಗಳಲ್ಲಿ ಒಬ್ಬರು ಬುದ್ಧಿಮಾಂದ್ಯರಾಗಿದ್ದರೆ, ಅವರ ಮಕ್ಕಳೂ ಬುದ್ಧಿಮಾಂದ್ಯರಾಗಿ ಹುಟ್ಟುವ ಸಂಭವ ಹೆಚ್ಚು. ಆದರೆ ಬುದ್ಧಿವಂತ ತಂದೆ-ತಾಯಿಗಳಿಗೆ ವಂಶಿಕ ಕಾರಣಗಳಿಂದ ಬುದ್ಧಿಮಾಂದ್ಯ ಮಗು ಹುಟ್ಟುವುದು ಅಪರೂಪವೇನಲ್ಲ.

**ಬುದ್ಧಿಮಾಂದ್ಯತೆ ವಂಶಪಾರಂಪರ್ಯವೇ?**

ಬುದ್ಧಿಮಾಂದ್ಯತೆ ಸ್ವಲ್ಪಮಟ್ಟಿಗೆ ವಂಶಪಾರಂಪರ್ಯ ವಾಗಿ ಬರುತ್ತದೆ. ವಂಶಿಕ ಕಾರಣಗಳಿಂದ ಒಂದು ಬುದ್ಧಿಮಾಂದ್ಯ ಮಗು ಇದ್ದರೆ, ಅಂತಹ ಇನ್ನೊಂದು ಮಗು ಆ ಕುಟುಂಬದಲ್ಲಿ ಹುಟ್ಟುವ ಸಂಭವ ಹೆಚ್ಚು. ಆದರೆ ಮುಂದೆ ಹುಟ್ಟುವ ಎಲ್ಲ ಮಕ್ಕಳೂ ಬುದ್ಧಿಮಾಂದ್ಯರಾಗುತ್ತಾರೆ ಎಂಬ ನಿಯಮವಿಲ್ಲ.

**ವಾತಾವರಣದ ಕಾರಣಗಳು**

ವಂಶಿಕ ನ್ಯೂನತೆ ಅಲ್ಲದೆ, ವಾತಾವರಣದ ಹಲವು ನ್ಯೂನತೆ ಮತ್ತು ಅಂಶಗಳಿಂದ ಬುದ್ಧಿಮಾಂದ್ಯತೆ ಬರಬಹುದು. ಸಾಕಷ್ಟು ಮುಂಜಾಗ್ರತೆ ವಹಿಸಿದರೆ, ಇವುಗಳಲ್ಲಿ ಬಹುಪಾಲು ಕಾರಣಗಳನ್ನು ನಿವಾರಿಸಬಹುದು. ಬುದ್ಧಿಮಾಂದ್ಯತೆ ಉಂಟಾಗದಂತೆ ತಡೆಗಟ್ಟಬಹುದು. ಮಗು ತಾಯಿಯ ಗರ್ಭದಲ್ಲಿರುವ ಒಂಭತ್ತು ತಿಂಗಳುಗಳ ಅವಧಿಯಲ್ಲಿ ಹೆರಿಗೆ ಆಗುವಾಗ ಮತ್ತು ಹೆರಿಗೆಯ ನಂತರದ ಅವಧಿಯಲ್ಲಿ ನಡೆಯುವ ಹಲವಾರು ವಿದ್ಯಮಾನಗಳು ಬುದ್ಧಿಮಾಂದ್ಯತೆಯನ್ನುಂಟು ಮಾಡಬಲ್ಲವು.

**ಗರ್ಭಧಾರಣೆಯ ಅವಧಿಯ ಅಂಶಗಳು**

೧. ತಡವಾಗಿ ಗರ್ಭಧಾರಣೆ : ಮೂವತ್ತೈದು ವರ್ಷ ವಯಸ್ಸಿನ ನಂತರ ಸ್ತ್ರೀ ಗರ್ಭಧರಿಸುವುದು.
೨. ಯಾವುದೇ ವಯಸ್ಸಿನ ಗರ್ಭಿಣಿ ಸ್ತ್ರೀಗೆ ಬರುವ ಚಿಕ್ಕಮ್ಮ ದಡಾರ, ವೈರಸ್‌ಜ್ವರ, ಫರಂಗಿರೋಗ, ಭ್ರೂಣಕ್ಕೆ ಹಾನಿ ಮಾಡುವ ವಿಷವಸ್ತು ಅಥವಾ ಔಷಧಗಳ ಸೇವನೆ, ಗರ್ಭಿಣಿ ಸ್ತ್ರೀ, ಮದ್ಯಪಾನ ಮತ್ತು ಇತರ ಮಾದಕ ವಸ್ತುಗಳನ್ನು ಸೇವಿಸುವುದು, ಧೂಮಪಾನ, ಹೊಟ್ಟೆಯ ಎಕ್ಸ್-ರೇ ತೆಗೆಸುವಿಕೆ (ಮುಖ್ಯವಾಗಿ ಗರ್ಭಧಾರಣೆಯ ಮೊದಲ ಮೂರು ತಿಂಗಳುಗಳಲ್ಲಿ)
೩. ಗರ್ಭಿಣಿ ಸ್ತ್ರೀಗೆ ಪೌಷ್ಟಿಕ ಆಹಾರದ ಕೊರತೆ
೪. ಗರ್ಭಿಣಿ ಸ್ತ್ರೀ ತೀವ್ರ ಮಾನಸಿಕ ಕ್ಲೇಶಕ್ಕೆ ಒಳಗಾಗಿ ತನ್ನ ಅವಶ್ಯಕತೆಗಳನ್ನು ನಿರ್ಲಕ್ಷಿಸುವುದು ಇತ್ಯಾದಿ.

**ಹೆರಿಗೆ ಸಮಯದ ಕಾರಣಗಳು**

ಯಾವುದೇ ಕಾರಣದಿಂದ ಹೆರಿಗೆ ಕಷ್ಟವಾದರೆ, ನಿಧಾನವಾದರೆ ಮತ್ತು ಸಕಾಲಕ್ಕೆ ಸೂಕ್ತ ವೈದ್ಯಕೀಯ ನೆರವು ಸಿಗದಿದ್ದರೆ, ಮಗು ಸುಸ್ತಾಗುತ್ತದೆ. ಜನನ ದ್ವಾರದಲ್ಲಿ ಅದರ ತಲೆ ಸಿಕ್ಕಿಹಾಕಿಕೊಂಡರೆ, ಮಿದುಳಿನಲ್ಲಿ ರಕ್ತಸ್ರಾವವಾಗಿ, ಮಿದುಳಿಗೆ ಹಾನಿಯಾಗಬಹುದು ಅಥವಾ ಹುಟ್ಟಿದ ತಕ್ಷಣ ಮಗು ಅಳದಿದ್ದರೆ, ಮಗುವಿನ ಉಸಿರಾಟ ಪ್ರಾರಂಭವಾಗುವುದಿಲ್ಲ. ಆಗ ಅದರ ಮಿದುಳಿಗೆ ಆಮ್ಲಜನಕದ ಕೊರತೆಯಾಗಿ, ಹಾನಿಗೀಡಾಗುತ್ತದೆ, ಬುದ್ಧಿಮಾಂದ್ಯತೆ ಬರುತ್ತದೆ.

(ಸೌಜನ್ಯ : ಬಿತ್ತರ, ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯಪುರ, ಕಮಲಾಪುರ-೫೮೩.೨೧)

# ವಿದ್ಯಾಭ್ಯಾಸ : ಒಂದು ಚಿಂತನ

- **ಡಾ. ಸಿ. ಅಶ್ವಥ್**
ನಂ. ೧೫೪೩, ೨ನೇ ಎ ಅಡ್ಡರಸ್ತೆ, ೧೬ನೇ ಮುಖ್ಯರಸ್ತೆ,
೨ನೇ ಹಂತ, ಜೆ.ಪಿ. ನಗರ, ಬೆಂಗಳೂರು-೭೮

ವಿದ್ಯಾಭ್ಯಾಸದ ಅವಶ್ಯಕತೆಯ ಬಗ್ಗೆ ವ್ಯಾಪಕ ಪ್ರಚಾರ ನಡೆಯುತ್ತಿರುವುದು ಸಂತೋಷದ ಸಂಗತಿ. ವಿದ್ಯಾವಂತರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆಯೆಂದು ಮೇಲ್ನೋಟಕ್ಕೆ ಅನ್ನಿಸುತ್ತದೆ. ಆದರೆ ಅಮಾನವೀಯ ಕೃತ್ಯಗಳು ಹಾಗೂ ಸಮಾಜ ಶೋಷಣಾ ಕಾರ್ಯಗಳು ವಿದ್ಯಾವಂತರಲ್ಲೇ ಹೆಚ್ಚಾಗಿ ಕಂಡುಬರುತ್ತಿರುವುದು ನಮ್ಮ ದೇಶದ ದುರಂತವೆನ್ನಬಹುದು. ಅದಕ್ಕೆ ಕಾರಣ ಇಂದಿನ ವಿದ್ಯಾಭ್ಯಾಸದ ಪದ್ಧತಿ ಹಾಗೂ ವಿದ್ಯಾಲಯಗಳಲ್ಲಿ ತಲೆ ಎತ್ತುತ್ತಿರುವ ರಾಜಕೀಯವೆಂದರೆ ತಪ್ಪಾಗಲಾರದು.

ಇಂದು ಸಾಕ್ಷರಸ್ಥರ ಸಂಖ್ಯೆ ಹೆಚ್ಚುತ್ತಿದೆಯೇ ವಿನಃ ವಿದ್ಯಾವಂತರ ಸಂಖ್ಯೆಯಲ್ಲವೆನ್ನಬಹುದು. ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಡಾಕ್ಟರಾಗಬೇಕು, ಎಂಜಿನಿಯರ್ ಆಗಬೇಕು, ಎಂ.ಬಿ.ಎ. ಓದಬೇಕು, ಐ.ಎ.ಎಸ್. ಮಾಡಬೇಕು.... ಮುಂತಾದ ಪ್ರಲೋಭಗಳನ್ನು ತೋರುವುದು, ಶತಾಯ-ಗತಾಯ ಅತಿ ಹೆಚ್ಚು ಅಂಕಗಳನ್ನು ಗಳಿಸುವ ಸಾಧನಗಳನ್ನು ಬಳಸುವುದು, ಮಕ್ಕಳ ಮನಸ್ಸಿನ ಮೇಲೆ ಒತ್ತಡ ಹೇರಿ ಪುಸ್ತಕದ ಬದನೇಕಾಯಿಗಳನ್ನಾಗಿ ಮಾಡುವುದು, ಅತಿ ಹೆಚ್ಚು ಹಣ ಗಳಿಸುವ ಬಗ್ಗೆ ಪ್ರಚಾರ ಮಾಡುವುದು ಮುಂತಾದವುಗಳನ್ನು ಕೆಲವರು ಮಾಡುತ್ತಿದ್ದಾರೆ. ಇದರಿಂದ ವಿದ್ಯಾಭ್ಯಾಸದ ದಿಕ್ಕೇ ತಪ್ಪುತ್ತಿದೆಯೆಂದರೆ ತಪ್ಪಾಗಲಾರದು.

ವಿದ್ಯಾರ್ಥಿ ದಿಶೆಯಲ್ಲಿರುವಾಗಲೇ ಎಲ್ಲಾ ಕಾಯಕದ ಬಗ್ಗೆ ಗೌರವ, ರಾಷ್ಟ್ರಪ್ರೇಮ, ಸಮಾಜಸೇವೆ, ಮಾನವೀಯ ಮೌಲ್ಯ, ಪಾಪಭೀತಿ, ತಾಯಿ-ತಂದೆಗಳ ಬಗ್ಗೆ ಭಕ್ತಿ, ಗುರು-ಹಿರಿಯರಲ್ಲಿ ಗೌರವ, ಸಮಾಜದ ದುರ್ಬಲರ ಬಗ್ಗೆ ಅನುಕಂಪ ಮುಂತಾದ ವಿಷಯಗಳನ್ನು ಪಾಠ-ಪ್ರವಚನಗಳಲ್ಲಿ ಅಳವಡಿಸಬೇಕು. ಇವುಗಳನ್ನು ವಿದ್ಯಾರ್ಥಿಗಳ ಮನದಾಳಕ್ಕೆ ಇಳಿಸುವಂತಹ ರೀತಿಯಲ್ಲಿ ತಯಾರು ಮಾಡಬೇಕು.

ವಿದ್ಯಾರ್ಥಿ ಹಾಗೂ ಗುರುಗಳ ಸಂಬಂಧವು ತಾಯಿ-ಮಗುವಿನ ಸಂಬಂಧದಂತಾಗಬೇಕು. ಡೊನೇಷನ್ ಹಾವಳಿ ತಪ್ಪಬೇಕು. ವಿದ್ಯಾಭ್ಯಾಸದಲ್ಲಿ ಹಣಕ್ಕಿಂತಲೂ ಪ್ರತಿಭೆ, ಮಾನವೀಯ ಮೌಲ್ಯ, ವಿದ್ಯಾರ್ಥಿಯ ಆಸಕ್ತಿ ಮುಂತಾದವುಗಳ ಆಧಾರದ ಮೇಲೆ ಉನ್ನತ ಶಿಕ್ಷಣ ದೊರೆಯುವಂತಾಗಬೇಕು. ವಿದ್ಯಾಭ್ಯಾಸ ಮುಗಿಸಿದ ವ್ಯಕ್ತಿ ಸತ್ಪ್ರಜೆಯಾಗಿ ರೂಪುಗೊಂಡಿರಬೇಕು. ಸಮಾಜಕ್ಕೆ ಉಪಯುಕ್ತ ವ್ಯಕ್ತಿಯಾಗಿ ಅರಳುವಂತಿರಬೇಕು.





# ಎಡೆಯೂರು ಸಿದ್ಧಲಿಂಗಯತಿ : ವಚನ ಯುಗದ ಪುನರುಜ್ಜೀವನ

- **ಡಾ. ಸಿ.ಯು. ಮಂಜುನಾಥ್**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ವಿಭಾಗ,
ಶ್ರೀ ರೇಣುಕಾಚಾರ್ಯ ಕಾಲೇಜು, ಬೆಂಗಳೂರು.

ಎಡೆಯೂರು ಸಿದ್ಧಲಿಂಗಯತಿಗಳು ವಚನಕಾರರಾಗಿ, ದಿವ್ಯ ಅನುಭಾವಿಗಳಾಗಿ ವಚನಯುಗದ ಪುನರುಜ್ಜೀವಕರಾಗಿ, ಆ ಕಾಲದ ಮಹಾನ್ ಸಂಘಟಕರಾಗಿ ವೀರಶೈವ ಧರ್ಮದ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದಾರೆ. ಅವರ ಅಸಾಧಾರಣ ವ್ಯಕ್ತಿತ್ವ ಆ ಯುಗದ ಚೈತನ್ಯವಾಗಿ ಸಮಕಾಲೀನ ಮತ್ತು ಮುಂದಿನ ಹಲವು ತಲೆಮಾರುಗಳಿಗೆ ಮಾರ್ಗ ದರ್ಶನವನ್ನೂ ಮತ್ತು ಸ್ಫೂರ್ತಿಯನ್ನೂ ನೀಡಿರುವುದು ಕಂಡು ಬರುತ್ತದೆ.

ಎಡೆಯೂರು ಸಿದ್ಧಲಿಂಗೇಶ್ವರರ ಕಾಲದ ಬಗ್ಗೆ ವಿಶೇಷ ಚರ್ಚೆ ವಿದ್ವಾಂಸರಲ್ಲಿ ನಡೆದಿದೆ. ಆ ಚರ್ಚೆಯ ವಿವರಗಳಿಗೆ ಹೋಗದೆ ಅದರ ಮುಖ್ಯ ಸಾರವನ್ನಷ್ಟೆ ತಿಳಿದರೆ ಪ್ರಸ್ತುತ ಉದ್ದೇಶಕ್ಕೆ ಸಾಕೆಂದು ಕಾಣುತ್ತದೆ. ಡಾ. ಎಲ್. ಬಸವರಾಜು ಅವರು ಎಡೆಯೂರು ಸಿದ್ಧಲಿಂಗಯತಿಗಳ ಜೀವಿತಾವಧಿಗಳ ಆದಿ ಅಂತ್ಯಗಳ ವರಿಷ್ಠ ಮಿತಿಯನ್ನು ಕ್ರಿ.ಶ. ೧೫೦೦-೧೫೮೪ ಎಂದು ಸದ್ಯಕ್ಕೆ ಸ್ವೀಕರಿಸಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ***(ಎಲ್. ಬಸವರಾಜು 'ತೋಂಟದ ಸಿದ್ಧಲಿಂಗ ಯತಿಗಳ ಜೀವನ; ಇತಿಹಾಸ ಮತ್ತು ದಂತಕಥೆ' ವಚನಕಾರ ಸಿದ್ಧಲಿಂಗಯತಿ; ಪು. ೧೯, ಬೆಂ.ವಿ.ವಿ., ೧೯೭೨).*** ಬೇರೆ ಬೇರೆ ವಿದ್ವಾಂಸರು ಸಿದ್ಧಲಿಂಗಯತಿಗಳ ಕಾಲವನ್ನು ಕ್ರಿ.ಶ. ೧೩ನೆಯ ಶತಮಾನದಿದ ೧೬ನೆಯ ಶತಮಾನದವರೆಗೆ ಚರ್ಚಿಸಿರುವುದುಂಟು. ***(ಎಸ್. ಶಿವಣ್ಣ 'ತೋಂಟದ ಸಿದ್ಧಲಿಂಗೇಶ್ವರ ಕಾಲವಿಚಾರ - ಒಂದು ಮರು ಪರಿಶೀಲನೆ' ; ಶ್ರೀಕಂಠತೀರ್ಥ ಪು ೩೦೯-೩೧೨.)*** ಎಸ್. ಶಿವಣ್ಣನವರು ಘನಲಿಂಗಿದೇವನ ಗುರುವಾದ ಭಂಡಾರಿ ಬಸವಪ್ಪೊಡೆಯ, ನಂಜನಗೂಡಿನ ೩೯೫ ಮತ್ತು ೩೯೬ನೆಯ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದರಿಂದ, ಆ ಎರಡೂ ಶಾಸನಗಳ ಕಾಲ ಕ್ರಿ.ಶ. ೧೫೧೪ ಆಗಿರುವುದರಿಂದ ಬಸಪ್ಪೊಡೆಯರ ಶಿಷ್ಯ ಕೂಗಲೂರು ನಂಜಯ್ಯ ಪ್ರಶಿಷ್ಯ ಘನಲಿಂಗಿ ದೇವನ ಕಾಲಕ್ರಮವಾಗಿ ಕ್ರಿ.ಶ. ೧೫೩೪-೧೫೩೯ ಮತ್ತು ಕ್ರಿ.ಶ. ೧೫೫೪-೧೫೫೯ ಎಂದು ಹೇಳಬಹುದಾದ್ದರಿಂದ ಘನಲಿಂಗಿ ದೇವ ತೋಂಟದ ಸಿದ್ಧಲಿಂಗರ ಕಿರಿಯ ಸಮಕಾಲೀನನೆಂಬ ಹಿನ್ನೆಲೆಯಲ್ಲಿ ತೋಂಟದ ಸಿದ್ಧಲಿಂಗ ದೇವರ ಕಾಲ ೧೫೬೦ ಎಂದು ಅಭಿಪ್ರಾಯಪಟ್ಟಿದ್ದಾರೆ. **(ಅದೇ ಪು.** ೩೧೨-೩೧೩)

ಎಡೆಯೂರು ಸಿದ್ಧಲಿಂಗೇಶ್ವರರ ವೈಯಕ್ತಿಕ ವಿಷಯಗಳು ಪೌರಾಣಿಕ ಆವರಣಗಳಲ್ಲಿ ಮುಳುಗಿ ಕಾವ್ಯ-ಪುರಾಣಗಳ, ಪವಾಡಗಳ ಜಟಿಲತೆಗಳಲ್ಲಿ ಖಚಿತವಾಗಿ ಗುರಿತಿಸಲು ಕಷ್ಟವಾಗುವಷ್ಟು ಗೋಜಲಾದಂತಿವೆ. ಎಡೆಯೂರು ಸಿದ್ಧಲಿಂಗೇಶ್ವರರ ಜನ್ಮಸ್ಥಳ ಚಾಮರಾಜನಗರ ತಾಲ್ಲೂಕಿನ ಹರದನಹಳ್ಳಿ, ಅವರ ತಾಯಿ ತಂದೆಗಳು, ಹೇರಂಬ ಕವಿಯನ್ನು ಅನುಸರಿಸಿ ಹೇಳುವುದಾದರೆ, ಜ್ಞಾನಾಂಗನೆ ಮತ್ತು ಮಲ್ಲಿಕಾರ್ಜುನ. ಅವರ ತಪೋಭೂಮಿ ಕಗ್ಗೆರೆ, ಐಕ್ಯಸ್ಥಳ ಎಡೆಯೂರು. ಅವರ ಜೀವನಗತಿಯಲ್ಲಿ ಹರದನಹಳ್ಳಿಯಿಂದ ಕಗ್ಗೆರೆ, ಅಲ್ಲಿಂದ ಎಡೆಯೂರು ಇವು ಪ್ರಮುಖ ಘಟ್ಟಸ್ಥಳಗಳಾಗಿ ಕಂಡರೂ ಇವುಗಳ ಮಧ್ಯೆ ಅವರು ವಿಹರಿಸಿದ ಹಳ್ಳಿಗಳು, ಊರುಗಳು, ಪಟ್ಟಣಗಳು ಹಲವು. ಅವುಗಳ ವಿವರವಾದ ಅಧ್ಯಯನ ಇನ್ನೂ ನಡೆಯಬೇಕಿದೆ.

ಸಿದ್ಧಲಿಂಗೇಶ್ವರ ವ್ಯಕ್ತಿತ್ವ, ಬಹುಮುಖವಾದದ್ದು. ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಧರ್ಮದ ಇತಿಹಾಸದಲ್ಲಿ ಬಸವಣ್ಣನವರು ಹೇಗೆ ಮುಖ್ಯ ಕೇಂದ್ರ ಬಿಂದುವಾಗಿದ್ದರೋ ಅದೇ ರೀತಿ ಎಡೆಯೂರು ಸಿದ್ಧಲಿಂಗೇಶ್ವರರು ಹದಿನಾರನೆಯ ಶತಮಾನದಲ್ಲಿ ಆ ಧರ್ಮದ ಕೇಂದ್ರಬಿಂದುವಾಗಿದ್ದರು. ಅವರನ್ನು ವಚನದ ಯುಗದ ಪುನರುಜ್ಜೀವಕರಾಗಿ ಸಮೀಕ್ಷಿಸುವುದು ಈ ಉಪನ್ಯಾಸದ ಮುಖ್ಯ ಉದ್ದೇಶವಾಗಿದೆ.

ವೀರಶೈವ ಧರ್ಮದ ಬೆಳವಣಿಗೆಯನ್ನು ನಾಲ್ಕು ಪ್ರಮುಖ ಘಟ್ಟಗಳಲ್ಲಿ ಗುರುತಿಸುವ ಪ್ರಯತ್ನವನ್ನು ಡಾ. ಎಂ. ಚಿದಾನಂದಮೂರ್ತಿಯವರು ಮಾಡಿದ್ದಾರೆ. **(ಎಂ. ಚಿದಾನಂದಮೂರ್ತಿ ; ಸಂಶೋಧನ ತರಂಗ ; ಪು ೫೧-೬೯,** ೧೯೬೬) ಆ ಧರ್ಮದ ನಾಲ್ಕನೆಯ ಘಟ್ಟದ

ಉತ್ತರಾರ್ಧವೆಂಬಂತೆ ಗುರುತಿಸಲ್ಪಟ್ಟಿರುವ ತೋಂಟದ ಸಿದ್ಧಲಿಂಗೇಶ್ವರರ ಕಾಲ ತುಂಬ ಮಹತ್ವದ್ದಾಗಿ ಕಂಡು ಬರುತ್ತದೆ. ಅವರಿಗಿಂತಲೂ ಹಿಂದೆ ವಚನಗಳ ಸಂಗ್ರಹ, ಜೋಡಣೆ, ವ್ಯಾಖ್ಯಾನಗಳಂತಹ ಪ್ರಯತ್ನಗಳು ನಡೆದಿದ್ದವು. ಉದಾಹರಣೆಗೆ ಮಹಾಲಿಂಗದೇವ, ಕಲ್ಲು ಮಠದ ಪ್ರಭುದೇವ ಮುಂತಾದವರ ಕಾರ್ಯಗಳನ್ನು ನೆನೆಯಬಹುದು. ಈ ಹಿನ್ನೆಲೆಯಲ್ಲಿ ಯಾವ ರಾಜಕೀಯ ಶಕ್ತಿಯ ಬೆಂಬಲವೂ ಇಲ್ಲದೆ ವಚನಯುಗದ ಪುನರುಜ್ಜೀವನವನ್ನು ಸಾಧಿಸಿದ್ದು ಹಿಂದಿನ ಪ್ರಯತ್ನಗಳಿಗೆ ಶಿಖರಪ್ರಾಯವಾಗಿದೆ.

ಎಡೆಯೂರು ಸಿದ್ಧಲಿಂಗಯತಿಗಳ ವಚನಯುಗದ ಪುನರುಜ್ಜೀವನದಲ್ಲಿ ಬಹುದೊಡ್ಡ ಹೆಸರು. ಅವರ ನೇತೃತ್ವದಲ್ಲಿ ವೀರಶೈವ ಧರ್ಮ ಮತ್ತು ವಚನಸಾಹಿತ್ಯ ಬಹು ದೊಡ್ಡ ಚಾಲನೆಯನ್ನು ಪಡೆದವು. ವೀರಶೈವ ಧರ್ಮದ ಇತಿಹಾಸವನ್ನು ಗಮನಿಸಿದರೆ ಬಸವ ಅಲ್ಲಮರಂತೆ ಬಹುದೊಡ್ಡ ಪ್ರಭಾವಲಯ ವನ್ನು ನಿರ್ಮಿಸಿದವರು ವಿರಳವೆಂದೇ ಹೇಳಬಹುದು. ಸಿದ್ಧಲಿಂಗೇಶ್ವರರೂ ಅವರಂತೆ ದೊಡ್ಡ ಪ್ರಭಾವಲಯವನ್ನು ನಿರ್ಮಿಸಿ ಆ ಯುಗದ ಕೇಂದ್ರಬಿಂದುವಾಗಿ ಮುಂದಿನ ಹಲವು ತಲೆಮಾರುಗಳಿಗೆ ತಮ್ಮ ಪ್ರಭಾವವನ್ನು ಬಿಂಬಿಸಿದವರು ಎಂಬುದು ಎದ್ದುಕಾಣುವ ಅಂಶವಾಗಿದೆ. ವೀರಶೈವ ಧರ್ಮದ ಪ್ರಮುಖರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ವಚನ ಸಾಹಿತ್ಯದೊಂದಿಗೆ ತಮ್ಮ ಸಂಬಂಧವನ್ನು ಇಟ್ಟುಕೊಂಡೇ ಬಂದಿದ್ದಾರೆ. ಸಿದ್ಧಲಿಂಗೇಶ್ವರರೂ ಕೂಡ ಹನ್ನೆರಡನೆಯ ಶತಮಾನದ ವಚನ ಯುಗದ ನಂತರ ಸುಮಾರು ಮುನ್ನೂರು ವರ್ಷಗಳ ಮೇಲೆ ನೇರವಾಗಿ ವಚನಗಳ ರಚನೆಗೆ ಕೈ ಹಾಕಿದರು. ವಚನ ಸಾಹಿತ್ಯದ ಈ ಎರಡನೆಯ ಘಟ್ಟದ ಮೊದಲ ವಚನಕಾರ ರಾಗಿರುವಂತೆ ಅಗ್ರವಚನಕಾರರೂ ಆಗಿದ್ದಾರೆ. ಅವರು ರಚಿಸಿರುವ 'ಷಟ್ಸ್ಥಲಜ್ಞಾನಸಾರಾಮೃತ' ೭೦೧ ವಚನಗಳ ಸಂಕಲನವಾಗಿದೆ. (**ಆರ್.ಸಿ. ಹಿರೇಮಠ (ಸಂ) : ಷಟ್‌ಸ್ಥಲ ಜ್ಞಾನಸಾರಾಮೃತ-೧೯೮೩**) ಈ ವಚನಗಳು ಬಸವಾದಿ ವಚನಕಾರರ ವಚನ ಪರಂಪರೆಯ ಸಮರ್ಥ ಮುಂದುವರಿಕೆ ಆಗಿರುವುದು ಗಮನಾರ್ಹವಾಗಿದೆ. ಆ ವಚನಗಳು ಮಹಾನ್ ವ್ಯಕ್ತಿತ್ವವೊಂದರ ಏರುವಿಕೆಯ ವಿವಿಧ ಹಂತಗಳನ್ನು, ಆಯಾಮಗಳನ್ನು ಬಿಡಿಸಿ ತೋರಿಸುತ್ತವೆ. ಹಿಂದಿನ ವಚನ ಸಾಹಿತ್ಯದ ಪೂರ್ಣ ಅರಿವು ತನ್ಮೂಲಕ ರೂಪಿಸಿಕೊಂಡ ಅಭಿವ್ಯಕ್ತಿಯ ಕ್ರಮ ಮತ್ತು ಅನುಭಾವಿ ಮನಸ್ಸಿನ ಪರಿಪಾಕ ಅವರ ವಚನಗಳಿಗೆ ಕಾಂತಿಯನ್ನು, ಅಭಿವ್ಯಕ್ತಿ ಕೌಶಲವನ್ನು ಸಹಜವಾಗಿ ನೀಡಿವೆ.

ಸಿದ್ಧಲಿಂಗೇಶ್ವರರು **'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ'** ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಮೇಲು ನೋಟಕ್ಕೆ ಎದ್ದು ಕಾಣುವ ಒಂದು ಅಂಶವೆಂದರೆ, ಪ್ರತಿಸ್ಥಲದ ಪ್ರಾರಂಭದಲ್ಲಿ ಬಂದಿರುವ ಸೂತ್ರ ಭಾಗಗಳು. ಇವು ಅವರ ಸ್ವತಂತ್ರ ರಚನಾ ವಿಧಾನಕ್ಕೆ ದ್ಯೋತಕವಾಗಿರುವಂತಿದೆ. ಅವರ ವಚನಗಳಲ್ಲಿ ಸಂಪ್ರದಾಯವನ್ನು ಅರಗಿಸಿಕೊಂಡ ನಾವೀನ್ಯವಿದೆ. ಕೆಲವು ಉಕ್ತಿಗಳಂತೂ ಪ್ರತಿಭಾಸ್ಪರ್ಶದಿಂದ ಕೂಡಿವೆ. **'ಮಿಂಚಿನ ಪ್ರಭೆಯಲ್ಲಿ ಪಂಚವದನನ ಕಂಡೆನಯ್ಯ'** *(೮೫)*, **'ಈಚಲು ತಿಂದ ನರಿ ತನ್ನ ವಿಕಾರಕ್ಕೆ ಒರಲುವಂತೆ, ಮಾತಿನ ಮಮಕಾರಕ್ಕೆ ಆಗಮುವ ಬಲ್ಲೆವೆಂದು ಕೂಡಿಗುವವು ನೋಡಾ'** *(೩೫೪)*, **'ಕೆರೆಯೊಡೆದ ಬಳಿಕ ತೂಡು ತಡೆಯಬಲ್ಲುದೆ', 'ಸಟ್ಟುಗ ಸವಿಯಬಲ್ಲುದೆ', 'ಗಂಡಂಗೆ ನಾಚಿದ ಹೆಂಡತಿ ಮಕ್ಕಳ ಹೇಂಗೆ ಹಡೆವಳಯ್ಯಾ'** ಎಂಬಂತಹ ಮಾತುಗಳು ಕಾವ್ಯಸ್ಪರ್ಶದಿಂದ ಕೂಡಿವೆ. ಅವರ ವಚನಗಳ ಸಾಹಿತ್ಯಾಂಶಗಳ ಬಗ್ಗೆ ವಿಸ್ತರಿಸದೆ ಡಾ. ಜಿ.ಎಸ್. ಶಿವರುದ್ರಪ್ಪನವರ ಮಾತುಗಳೊಂದಿಗೆ ಅವರ ವಚನಗಳ ಸಾಹಿತ್ಯ ಸಮೀಕ್ಷೆಯನ್ನು ಮಾಡಬಹುದು. 'ಸಾಹಿತ್ಯದ ದೃಷ್ಟಿಯಿಂದ ನೋಡಿದರೆ ಇವುಗಳ ಸಾಹಿತ್ಯಕ ಮೌಲ್ಯ, ಬಸವಾದಿ ವಚನಗಳ ಸಾಹಿತ್ಯಕ ಗುಣಗಳ ಎತ್ತರಕ್ಕೆ ಬಾರದು. ಸಿದ್ಧಲಿಂಗರು, ಬಸವ ಪರಂಪರೆಯೊಂದಿಗೆ ತಮ್ಮನ್ನು ಹೊಂದಿಸಿಕೊಂಡು, ವಚನ ಪರಂಪರೆಯನ್ನು, ಮೂರು ಶತಮಾನಗಳ ನಂತರ ಶ್ರದ್ಧೆಯಿಂದ, ಸುಸಮರ್ಥವಾಗಿ ಮುಂದುವರೆಸಿದವರೆಂಬುದೆ ಗಮನಿಸತಕ್ಕ ಸಂಗತಿಯಾಗಿದೆ. ಆದರೆ ಸಿದ್ಧಲಿಂಗರ ತಾಂತ್ರಿಕ ಪರಿಣತಿ, ಕೇವಲ ಅನುಕರಣದಿಂದ ಪ್ರಾಪ್ತವಾಗದ, ಒಂದು ಅಭಿವ್ಯಕ್ತಿಯ ಸ್ಪಷ್ಟತೆ ಮತ್ತು ವಿಶಿಷ್ಟತೆ, ಅಂತರನುಭವಗಳನ್ನು ಬಹಿರಂಗದ ಶಬ್ದಚಿತ್ರಗಳಲ್ಲಿ ಹಿಡಿದಿಡುವಲ್ಲಿ,, ಅಲ್ಲಲ್ಲಿ ಕಂಡುಬರುವ ಹೊಸತನ, ಸಾಹಿತ್ಯಾಂಶವನ್ನು ತಕ್ಕಮಟ್ಟಿಗೆ ಪ್ರಕಟಿಸುತ್ತದೆ'. **(ಜಿ.ಎಸ್. ಶಿವರುದ್ರಪ್ಪ 'ಸಿದ್ಧಲಿಂಗಯತಿಗಳ ವಚನಗಳ ಸಾಹಿತ್ಯಿಕ ವಿವೇಚನೆ' ವಚನಕಾರ ಸಿದ್ಧಲಿಂಗಯತಿ; ಪು. ೯೮)**

ಸಿದ್ಧಲಿಂಗಯತಿಗಳನ್ನು ಕುರಿತು ರಚಿತವಾದ ಮುಂದಿನ ಕೃತಿಗಳಲ್ಲಿ ಅವರ ವ್ಯಕ್ತಿತ್ವವನ್ನು ಬಿಂಬಿಸುವ ಉದ್ದೇಶದಲ್ಲಿ ಅಧಿಕವಾಗಿ ಪವಾಡಗಳ ಹೆಣಿಗೆ ಇರುವಂತೆ ಕಂಡುಬರುತ್ತದೆ. ಪವಾಡಗಳು ಯಾವ ವ್ಯಕ್ತಿಯನ್ನೂ ವೈಚಾರಿಕ ದೃಷ್ಟಿಯಿಂದ ದೊಡ್ಡವನನ್ನಾಗಿ ಮಾಡುವುದಿಲ್ಲವಾದ್ದರಿಂದ ಅವರು ಮೆರೆದಿರಬಹುದಾದ ಪವಾಡಗಳ ಚರ್ಚೆಯ ವಿಷಯಕ್ಕೆ ಹೋಗದೆ





ಅವರು ತಮ್ಮ ವ್ಯಕ್ತಿತ್ವದ ಮೂಲಕ, ಕಾರ್ಯಗಳ ಮೂಲಕ ಮತ್ತು ಸಂಘಟನೆಯ ಮೂಲಕ ವಚನ ಯುಗದ ಪುನರುಜ್ಜೀವನಕ್ಕೆ ಕಾರಣಕರ್ತರಾದುದನ್ನು ಗುರುತಿಸಬಹುದೆಂದು ಕಾಣುತ್ತದೆ.

ಸಿದ್ಧಲಿಂಗಯತಿಗಳು ತಮ್ಮ ಅಸಾಮಾನ್ಯ ವ್ಯಕ್ತಿತ್ವದಿಂದ ಅನೇಕ ಶಿಷ್ಯ-ಪ್ರಶಿಷ್ಯ ಸಮೂಹವನ್ನು ಪಡೆದಿದ್ದರು. ಹೀಗಾಗಿ ಅಪೂರ್ವ ರೀತಿಯಲ್ಲಿ ವೀರಶೈವ ಧರ್ಮದ ವ್ಯಾಪಕ ಪ್ರಸಾರವನ್ನು ಮಾಡಲು ಸಾಧ್ಯವಾಯಿತು. ಬಸವಾದಿ ವಚನಕಾರರಿಗೆ ಇದ್ದ ಧಾರ್ಮಿಕ, ಸಾಮಾಜಿಕ ಒತ್ತಡ ಸಿದ್ಧಲಿಂಗರ ಕಾಲದಲ್ಲಿ ಇರಲಿಲ್ಲ. ಒಂದು ರೀತಿಯ ಸಿದ್ಧ ಚೌಕಟ್ಟಿಗೆ ಸತ್ವ ತುಂಬುವ, ಅಳವಡಿಸುವ, ವ್ಯಾಖ್ಯಾನಿಸುವ, ಆಕರ್ಷಿಸುವ ಜವಾಬ್ದಾರಿಯನ್ನು ನಿರ್ವಹಿಸಿದರು. ಇದಕ್ಕೆ ಪೂರ್ವ ಪರಂಪರೆಯ ಸತ್ವದ ಅರಿವು ತುಂಬ ಮುಖ್ಯವಾದುದು ಎಂಬುದನ್ನು ಮರೆಯಬಾರದು. ಪೂರ್ವಪರಂಪರೆಯ ಉತ್ತರಾದಿಗಳೆಂದು ತಮ್ಮನ್ನು ಆದರೊಂದಿಗೆ ಗುರುತಿಸಿಕೊಂಡು ಶ್ರದ್ಧೆ ಗೌರವಗಳಿಂದ ಆ ಮಾರ್ಗದಲ್ಲಿ ನಡೆದು ತಮತ್ತ ಗಮನಾರ್ಹ ಸಂಖ್ಯೆಯಲ್ಲಿ ಜನರನ್ನು ಸೆಳೆದಿದ್ದಾರೆ. ಇದು ಬಹುದೊಡ್ಡ ಸಾಧನೆಯೇ ಆಗಿದೆ.

ಸಿದ್ಧಲಿಂಗರ ಪ್ರಭಾವ ಗಣನೀಯ ಪ್ರಮಾಣದಲ್ಲಿ ಮುಂದಿನ ತಲೆಮಾರುಗಳಿಗೆ ಆಗಿರುವುದು ಸ್ಪಷ್ಟವಿದೆ. ಅವರ ಬಗ್ಗೆ ಶಾಂತೇಶ ಕವಿಯ ಸಿದ್ಧೇಶ್ವರ ಪುರಾಣ (ಕ್ರಿ.ಶ. ೧೫೬೧), ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ (ಕ್ರಿ.ಶ. ೧೬೦೬) ಮತ್ತು ಹೇರಂಬನ ಸಿದ್ಧೇಶ್ವರ ಸಾಂಗತ್ಯದಂಥ ಸ್ವತಂತ್ರ ಕೃತಿಗಳು ನಿರ್ಮಾಣವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಇದಲ್ಲದೆ ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ (ಕ್ರಿ.ಶ. ೧೫೮೪), ಸಿದ್ಧನಂಜೇಶನ ಗುರುರಾಜ ಚಾರಿತ್ರ (ಕ್ರಿ.ಶ. ೧೫೮೪-೧೬೭೯), ಮುಂತಾದ ಕೃತಿಗಳಲ್ಲಿಯೂ ಅವರ ಬಗ್ಗೆ ವಿವರಗಳು ಮೂಡಿಬಂದಿವೆ. ಮುಂದಿನ ತಲೆಮಾರುಗಳಿಗೆ 'ತೋಂಟದಲ್ಲಮ'ನೆಂಬ ಪ್ರಭಾವಲಯವನ್ನು ನಿರ್ಮಿಸಿದ ಅವರ ಸಿದ್ಧಿಗಳು ಅವರು ಜನಮನದಲ್ಲಿ ಬೆಳೆದಿದ್ದ ಎತ್ತರವನ್ನು ಬಿಂಬಿಸುತ್ತವೆ.

ಸಿದ್ಧಲಿಂಗರು ವಚನಗಳನ್ನು ರಚಿಸಿರುವುದರ ಮೂಲಕ ಮಾರ್ಗ ಹಾಕಿಕೊಟ್ಟಂತೆ ಅವರ ಮಾರ್ಗದಲ್ಲಿ ಮುಂದುವರಿದ ಶಿಷ್ಯರೂ ಇದ್ದಾರೆ. ಸ್ವತಂತ್ರ ಸಿದ್ಧಲಿಂಗೇಶ್ವರ ಸಿದ್ಧಲಿಂಗ ಶಿಷ್ಯ ಅವನು *'ನಿಜಗುರು ಸಿದ್ಧಲಿಂಗೇಶ್ವರಾ'* ಎಂಬ ಅಂಕಿತದಲ್ಲಿ ೪೩೦ ವಚನಗಳನ್ನು ರಚಿಸಿದ್ದಾನೆ. ಇವುಗಳಲ್ಲದೆ ಜಂಗಮ ರಗಳೆ ಮತ್ತು ಮುಕ್ತಾಂಗನಾ ಕಂಠಮಾಲೆ ಎಂಬ ಕೃತಿಗಳನ್ನು ರಚಿಸಿದಂತೆ ತಿಳಿದು ಬರುತ್ತದೆ. ಸಿದ್ಧಲಿಂಗರ ಶಿಷ್ಯರಲ್ಲಿ ಗಮನಾರ್ಹವಾದ ಇನ್ನೊಬ್ಬ ವಚನಕಾರನೆಂದರೆ ಘನಲಿಂಗಿದೇವ. ಇವನು ಸುತ್ತೂರಿನ ಮಠಾಧ್ಯಕ್ಷನಾಗಿದ್ದನು. ಇವನಿಗೆ ಘನಲಿಂಗಿ ಎಂಬ ನಾಮಕರಣವನ್ನು ಸಿದ್ಧಲಿಂಗರೇ ಮಾಡಿದರೆಂದು ಒಂದು ವಚನದಲ್ಲಿ ಹೇಳಿಕೊಂಡಿದ್ದಾನೆ. **(ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು (ಸಂ) : ಘನಲಿಂಗದೇವರ ವಚನಗಳು ; ಪು. ೫)** ಗುಮ್ಮಳಾಪುರದ ಸಿದ್ಧಲಿಂಗಯತಿಯೂ ರಚಿಸಿದ ಕೆಲವು ವಚನಗಳು ದೊರೆತಿರುವುದು ತಿಳಿದು ಬರುತ್ತದೆ. ೮ *(ಎಂ. ಚಿದಾನಂದಮೂರ್ತಿ ; ವಚನ ಸಾಹಿತ್ಯ ; ಪು. ೨೨೯, ೧೯೭೫)*

ಸಿದ್ಧಲಿಂಗರು ವಚನ ರಚನೆಗೆ ಹೇಗೆ ಪ್ರೇರಣೆ, ಸ್ಫೂರ್ತಿಯನ್ನು ನೀಡಿದರೋ ಹಾಗೆಯೇ ವಚನ ಸಂಕಲನಕಾರರಿಗೆ, ಟೀಕಾಕಾರರಿಗೆ, ವ್ಯಾಖ್ಯಾನಕಾರರಿಗೆ ನೇರವಾಗಿಯೋ, ಪರೋಕ್ಷವಾಗಿಯೋ ಪ್ರಭಾವವನ್ನು ಬೀರಿದ್ದಾರೆ. ಇದು ಅಸಾಧಾರಣವಾದ ಸಾಧನೆಯಾಗಿದೆ. ವೀರಶೈವ ಧರ್ಮಪ್ರಚಾರ ಒಂದು ಪರಂಪರೆಯಾಗಿ ಬೆಳೆಯಲು ಕಾರಣವಾಯಿತು. ಸಿದ್ಧಲಿಂಗರು ತಾವೇ ವಚನ ಸಂಕಲನ, ವ್ಯಾಖ್ಯಾನಗಳನ್ನು ಮಾಡಿದಂತೆ ಕಂಡುಬರುವುದಿಲ್ಲವಾದರೂ ತಮ್ಮ ಶಿಷ್ಯ, ಪ್ರಶಿಷ್ಯರ ಆ ಕ್ಷೇತ್ರಗಳಲ್ಲಿ ಕಾರ್ಯಪ್ರವೃತ್ತರಾಗುವಂತೆ ನೋಡಿಕೊಂಡರು. ಶೂನ್ಯ ಸಂಪಾದನೆಗಳನ್ನು ರಚಿಸಿದ ಗುಮ್ಮಳಾಪುರದ ಸಿದ್ಧಲಿಂಗಯತಿ ಎಡೆಯೂರು ಸಿದ್ಧಲಿಂಗಯತಿಗಳ ನೇರಶಿಷ್ಯ. ಗೂಳೂರು ಸಿದ್ಧವೀರಣ್ಣೊಡೆಯ ಗುಮ್ಮಳಾಪುರದ ಸಿದ್ಧಲಿಂಗಯತಿಗಳ ಶಿಷ್ಯ, ಅವರಿಬ್ಬರೂ ತಮ್ಮ ಶೂನ್ಯಸಂಪಾದನೆಗಳಲ್ಲಿ ಸಿದ್ಧಲಿಂಗಯತಿಗಳನ್ನು ಭಕ್ತಿಯಿಂದ ಸ್ಮರಿಸಿದ್ದಾರೆ.

ಸಿದ್ಧಲಿಂಗಯತಿಗಳ ಶಿಷ್ಯನಾದ ಬೋಳ ಬಸವೇಶ್ವರನ ಶಿಷ್ಯನಾದ ಸಂಪಾದನೆಯ ಚೆನ್ನಂಜೆದೇವ, ಆಚರಣೆಯ ಸಂಬಂಧದ ವಚನಗಳು (೩೬೧), ಬಸವ ಸ್ತೋತ್ರದ ವಚನಗಳು (೧೨೩) ಮತ್ತು ಮಿಶ್ರಸ್ತೋತ್ರದ ವಚನಗಳು (೧೦೮) ಎಂಬ ಸಂಪಾದನ ಕೃತಿಗಳನ್ನು ರಚಿಸಿದ್ದಾನೆ. ಇದೇ ರೀತಿ ಚೆನ್ನಂಜೆದೇವನ ಶಿಷ್ಯನಾದ ಎಳಮಲೆಯ ಗುರು ಶಾಂತದೇವ ಶರಣ ಸ್ತೋತ್ರದ ವಚನ, ಲಿಂಗ ವಿಕಳಾವಸ್ಥೆಯ ವಚನ ಎಂಬ ತಲಾ ೧೦೧ ವಚನಗಳುಳ್ಳ ಸಂಗ್ರಹಗಳನ್ನು ರಚಿಸಿದ್ದಾನೆ. ಇದೇ ರೀತಿ ಎಳಮಲೆಯ ಗುರುಶಾಂತನ ಶಿಷ್ಯ ಸಂಪಾದನೆಯ ಎಳಮಲೆಯ ಸಿದ್ಧ ವೀರಣಾಚಾರ್ಯನೂ ಸಂಗ್ರಹಕಾರ ಮತ್ತು ಕವಿಯೂ ಆಗಿದ್ದನು. ಹೀಗೆ ಸಿದ್ಧಲಿಂಗರ ಶಿಷ್ಯ, ಪ್ರಶಿಷ್ಯ ಪರಂಪರೆ ವಚನಗಳ ಸಂಕಲನ ಕಾರ್ಯವನ್ನು ನಿರ್ವಹಿಸಿರುವುದು ಕಂಡುಬರುತ್ತದೆ.

ಸಿದ್ಧಲಿಂಗ ಯತಿಗಳ ಶಿಷ್ಯನಾದ ಗುಬ್ಬಿಯ ಮಲ್ಲಣನು ಗಣಭಾಷ್ಯ ರತ್ನಮಾಲೆ, ವಾತುಲ ತಂತ್ರ ಟೀಕೆಗಳನ್ನು ಬರೆದಿದ್ದಾನೆ. ಇದೇ ರೀತಿ ಸಿದ್ಧಳಿಂಗಯತಿಯ ಶಿಷ್ಯನಾದ ಸಾನಂದ ಶಿವಯೋಗಿಯು ವೀರ ಮಾಹೇಶ್ವರಾಚಾರ ಸಾರೋದ್ಧಾರಕ್ಕೆ ಟೀಕೆಯನ್ನು ಬರೆದಿದ್ದಾನೆ. ಹೀಗೆಯೇ ಅವರ ಶಿಷ್ಯರಲ್ಲಿ ಮಲ್ಲಿಕಾರ್ಜುನ ಕವಿಯು ಶ್ವೇತನ ಸಾಂಗತ್ಯವನ್ನೂ ಆನಂದ ಬಸವಲಿಂಗ ಶಿವಯೋಗಿಯು ಮಾಚಿದೇವ ಮನೋವಿಲಾಸವನ್ನೂ ರಚಿಸಿದ್ದಾರೆ.

ಹೀಗೆಯೇ ಗುರುತಿಸುತ್ತಾ ಹೋದರೆ ಸಿದ್ಧಲಿಂಗರ ಬೆಡಗಿನ ವಚನಗಳಿಗೆ ಟೀಕೆಯನ್ನು ಮತ್ತು ಬಸವಣ್ಣನವರ ಷಟ್ಸ್ಥಲದ ಬೆಡಗಿನ ವಚನಗಳಿಗೆ ಟೀಕೆಯನ್ನು ಬರೆದಿರುವ ಸೋಮಶೇಖರ ಶಿವಯೋಗಿ ಸಿದ್ಧಲಿಂಗರ ಪರಂಪರೆಯಲ್ಲಿ ಎಂಟನೆಯವನಾಗಿದ್ದಾನೆ. ಸೋಮಶೇಖರ ಶಿವಯೋಗಿ ತನ್ನ ಗುರು ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ. ತೋಂಟದ ಸಿದ್ಧಲಿಂಗೇಶ್ವರ-ಬೋಳ ಬಸವೇಶ್ವರ-ಗೂಳೂರು ಸಿದ್ಧಲಿಂಗಯ್ಯ-ಗುಮ್ಮಳಾಪುರದ ಸಿದ್ಧವೀರಯ್ಯ-ಗಗನದಯ್ಯ-ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವವ-ಮುರಿಗಾ ಶಾಂತವೀರೇಶ್ವರ-ಮುರಿಗಾ ಗುರುಸಿದ್ಧೇಶ್ವರ-ಅವರ ಶಿಷ್ಯ ಸೋಮಶೇಖರ ಶಿವಯೋಗಿ. ***(ಬಿ.ವಿ. ಶಿರೂರ (ಸಂ) : ತೋಂಟದ ಸಿದ್ಧಲಿಂಗೇಶ್ವರನ ಷಟ್ಸ್ಥಲ ಜ್ಞಾನಾಮೃತದ ಬೆಡಗಿನ ವಚನದ ಟೀಕೆ : ಪು. ೨೪)*** ಸಿದ್ಧಲಿಂಗರ ಶಿಷ್ಯ ಪ್ರಶಿಷ್ಯ ಪರಂಪರೆಗೆ ಕಂಬಳಿದೇವ, ಸಿದ್ಧಮಲ್ಲೇಶ್ವರ, ಚೆನ್ನದೇವರು ಮುಂತಾದವರನ್ನು ಸೇರಿಸಬಹುದೆಂದು ಕಾಣುತ್ತದೆ.

ಸಿದ್ಧಲಿಂಗ ಯತಿಗಳ ಪ್ರಭಾವ ಶಿಷ್ಯ ಪರಂಪರೆಯ ಮೂಲಕ ಬೆಳಗುತ್ತಾ ನಡೆಯಿತು. ಅವರಿಗೆ ವಚನಕಾರ, ಸಂಗ್ರಹಕಾರ, ವ್ಯಾಖ್ಯಾನಕಾರ, ಟೀಕಾಕಾರರಲ್ಲದೆ ಬಹುದೊಡ್ಡ ಶಿಷ್ಯ ಸಮೂಹದ ಬೆಂಬಲವಿದ್ದಿತು. 'ಇಷ್ಟೊಂದು ದೊಡ್ಡ ಶಿಷ್ಯ ಸಮೂಹವನ್ನು ಕಟ್ಟಿ ಇಷ್ಟೊಂದು ಸಾಹಿತ್ಯ ಕೃತಿಗಳಿಗೆ ಮೂಲ ಪ್ರೇರಕವಾಗಿರುವುದು ಕನ್ನಡದಲ್ಲಂತೂ ಅತ್ಯಪೂರ್ವ' ಎಂದು ಡಾ. ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. ***(ಎಂ. ಚಿದಾನಂದಮೂರ್ತಿ ; ಸಂಶೋಧನ ತರಂಗ, ಪು. ೬೬)*** ಅವರು ಮುಂದುವರಿದು 'ಸಿದ್ಧಲಿಂಗಯತಿಯು ಮಾಡಿದನೆಂದು ಹೇಳಲಾದ ಪವಾಡಗಳಿಗಿಂತ ಈ ಪವಾಡವು ಅತ್ಯಂತ ಆಶ್ಚರ್ಯಕರವಾದುದು. ಆದ್ದರಿಂದಲೇ ಹಿಂದೆ ನಾವು ಹೇಳಿದ್ದು - ಅವನು ಬರೆದ ವಚಗಳಿಗಿಂತ ಅಮೂಲ್ಯ ಅವನು ಬರೆದ ವ್ಯಕ್ತಿಗಳು ಎಂದು. ಅವನು ಬರೆದದ್ದು 'ಕವಿಗಳನ್ನು, ವಚನಕಾರರನ್ನು, ವೀರಶೈವ ಧರ್ಮದ ಮೂರ್ತಿಮತ್ತಾಗಿರುವ ಗುರುಗಳನ್ನು ಮತ್ತು ಶಿಷ್ಯರನ್ನು' ಎಂದಿದ್ದಾರೆ. ಹೀಗೆ ಎಲ್ಲ ದೃಷ್ಟಿಗಳಿಂದ ಸಿದ್ಧಲಿಂಗ ಯತಿಗಳು ವಚನ ಯುಗದ ಸಮರ್ಥ ಮುಂದುವರಿಕೆಯಾದಂತೆ ಒಂದು ದೊಡ್ಡ ಪರಂಪರೆಯ ಒಂದು ಘಟ್ಟದ ಪ್ರಮುಖ ಕೇಂದ್ರವಾಗಿ ನಿಂತು ಮುಂದಿನ ಪರಂಪರೆಯ ಸಮರ್ಥ ಮಾರ್ಗದರ್ಶಕರಾಗಿ ಬಹು ಅಮೂಲ್ಯವಾದ ಕಾರ್ಯವನ್ನು ನಿರ್ವಹಿಸಿದ್ದಾರೆ.

(ಸೌಜನ್ಯ : ಉಪನ್ಯಾಸ ಸಂಚಯ)

ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ಕೊನೆಗೆ ಅವನ ಮನೆಯಲಿ ಉಣಬಾರದೆಂದು
ಅಕ್ಕಿ ಕಣಕವ ತಕ್ಕೊಂಡು ಹೋಗುವ ಗುರುವಿನ ಕಂಡು
ಕೆಡವಿ ಹಾಕಿ ಮೂಗನೆ ಕೊಯ್ದು
ಇಟ್ಟಿಗೆಯ ಕಲ್ಲಿಂದ ತಿಕ್ಕಿ, ಸಾಸಿವೆಯಹಿಟ್ಟನ್ನು ತಳೆದು
ಲಿಂಬಿಯ ಹುಳಿಯನ್ನು ಹಿಂಡಿ
ಪಡುವ ಗಾಳಿಗೆ ಹಿಡಿಯೆಂದಾತ ನಮ್ಮ
ಅಂಬಿಗರ ಚೌಡಯ್ಯ!

-- ಅಂಬಿಗರ ಚೌಡಯ್ಯ





# ಲಿಂಗಪುರಾಣ : ಒಂದು ಅವಲೋಕನ

- ಆರ್.ಜಿ. ಶ್ಯಾನಭಾಗ,
ಹೊನ್ನಾವರ

ಶಿವನನ್ನು ಲಿಂಗರೂಪದಲ್ಲಿ ಆರಾಧಿಸುವ ಸಂಪ್ರದಾಯ ರಾಮಾಯಣ ಹಾಗೂ ಮಹಾಭಾರತ ಕಾಲದಷ್ಟೇ ಪುರಾತನವಾದುದು. ಅನುಶಾಸನ ಪರ್ವ, ಸೌಸ್ತಿಕ ಪರ್ವ ಹಾಗೂ ವನಪರ್ವಗಳಲ್ಲಿ ಶಿವಲಿಂಗ ಪೂಜೆಯ ಉಲ್ಲೇಖವಿದೆ. ಕಿರಾತನು ಅರ್ಜುನನ್ನು ಸೋಲಿಸಿದ ನಂತರ ಅರ್ಜುನನು ಸ್ಥಂಡಿಲವನ್ನು ಮಾಡಿ ಪೂಜಿಸುತ್ತಾನೆ. ಸ್ಥಂಡಿಲವೆಂದರೆ ಮಣ್ಣಿನ ರಾಶಿಯಿಂದ ನಿರ್ಮಿತವಾದ ಲಿಂಗವೆಂದರ್ಥ.

ಶಿವನು ಸದಾ ತನ್ನ ಕೊರಳಲ್ಲಿ ಲಿಂಗವನ್ನು ಧರಿಸುತ್ತಿದ್ದನು. ಇದು ಆತ್ಮಲಿಂಗವೆಂದು ಗೋಕರ್ಣ ಮಹಾತ್ಮೆಯಿಂದ ತಿಳಿದುಬರುವುದು. ಗೋಕರ್ಣದಲ್ಲಿ ರಾವಣನು ಶಿವನ ಲಿಂಗವನ್ನು ಪೂಜಿಸಿದ ಪೌರಾಣಿಕ ಕತೆಯೂ ಅಷ್ಟೇ ಆಸಕ್ತಿಯಿಂದ ಕೂಡಿದೆ. ರಾವಣನು ತನ್ನ ತಾಯಿಯ ಅಪೇಕ್ಷೆಯಂತೆ ೧೦ ಕೋಟಿ ಲಿಂಗವನ್ನು ಸಂದರ್ಶಿಸಿ ಪೂಜಿಸಲು ಹೊರಟನು. ಶಿವನಲ್ಲಿರುವ ಆತ್ಮಲಿಂಗವನ್ನು ದಿನನಿತ್ಯ ಒಂದು ಬಿಲ್ವಪತ್ರದಿಂದ ಪೂಜಿಸಿದರೆ ೧೦ ಕೋಟಿ ಲಿಂಗಗಳನ್ನು ಪೂಜಿಸಿರುವಷ್ಟೇ ಪುಣ್ಯ ಲಭಿಸುವುದೆಂಬ ವೃತ್ತಾಂತ ಅವನಿಗೆ ಯಾರಿಂದಲೋ ತಿಳಿದು ಬಂದಿತು. ಆದ್ದರಿಂದ ಶಿವನನ್ನು ಒಲಿಸಿ ಅದನ್ನು ಪಡೆದನು. ಅದನ್ನು ಒಯ್ಯುವಾಗ ಕೆಳಗಿಡಬಾರದೆಂಬ ನಿಯಮವನ್ನು ರಾವಣನು ಉಲ್ಲಂಘಿಸಿದ್ದರಿಂದ ಲಿಂಗ ಗೋಕರ್ಣದಲ್ಲಿ ತನ್ನ ಬೇರನ್ನು ಸಪ್ತ ಪಾತಾಳಕ್ಕೆ ಬಿಟ್ಟು ಸ್ಥಿರಗೊಂಡಿತು. ರಾವಣನ ಬಲಪ್ರಯೋಗದಿಂದಾದಲೂ ಅದನ್ನು ಕೀಳಲಾಗಲಿಲ್ಲ. ಆ ಲಿಂಗ ಮಹಾಬಲೇಶ್ವರವೆನಿಸಿತು.

ಲಿಂಗವೆಂದರೆ ಸಂಕೇತ ಗುರುತು ಹಾಗೂ ಚಿಹ್ನೆ ಎಂದರ್ಥ. ಶಿವನನ್ನು ಲಿಂಗ ರೂಪದಲ್ಲಿ ಪೂಜಿಸಲು ಕಾರಣ ಅವನ ವಾಹನವಾದ ನಂದಿಯ ಬೆನ್ನಿನ ಮೇಲಿರುವ ಗೂಡು ಎಂಬ ನಂಬಿಕೆಯೂ ಇದೆ. ಶಿವನು ಸದಾ ನೆಲೆಸಿರುವ ತಾಣವಾದ ಪರ್ವತ ಶಿಖರದ ರೂಪವನ್ನು ಲಿಂಗ ಹೊದಿರುವುದೇ ಲಿಂಗ ಪೂಜೆಗೆ ಇನ್ನೊಂದು ಕಾರಣವಾಗಿದೆ. ಶಿವನ ಮುಖವನ್ನು ಲಿಂಗದ ಮೇಲೆ ಪಡಿಮೂಡಿಸಿ ಆರಾಧಿಸುತ್ತಾರೆ. ಇದಕ್ಕೆ ಶಿವಲಿಂಗೋದ್ಭವದ ಮೂರ್ತಿ ಎನ್ನುವರು. ಆಂಧ್ರದ ಮುಖಲಿಂಗಗ್ರಾಮಗಳಲ್ಲಿ ಲಿಂಗೋದ್ಭವಕವಾಗಿರುವ ಶಿವನ ಏಕಪಾದಮೂರ್ತಿಯು ಇದೆ.

**ಲಿಂಗ ಪ್ರಭೇದಗಳು**

ಲಿಂಗಗಳಲ್ಲಿ ಎರಡು ಪ್ರಕಾರ. ಸ್ಥಾವರ ಹಾಗೂ ಜಂಗಮ. ಸ್ಥಾವರವೆಂದರೆ ಗುಡ್ಡದಂತೆ ಅಲುಡಾಗದೇ ಇರುವ, ಜಂಗಮವೆಂದರೆ ಗುಡ್ಡದಂತಿರುವ ಸಣ್ಣಸಣ್ಣ ಕಲ್ಲುಗಳು. ಅಂದರೆ ಸಾಗಾಟ ಮಾಡಬಹುದಾದ ಎಂಬ ಅರ್ಥ. ಜಂಗಮ ಲಿಂಗಕ್ಕಿಂತ ಸ್ಥಾವರ ಲಿಂಗವೇ ಶ್ರೇಷ್ಠವೆಂಬ ಭಾವನೆಯಿದೆ. ಜಂಗಮ ಲಿಂಗವನ್ನು ಕಲ್ಲು, ರತ್ನ, ಲೋಹ ಹಾಗೂ ಮಣ್ಣಿನಿಂದಲೂ ಮಾಡುತ್ತಾರೆ. ಸ್ಥಾವರ ಮತ್ತು ಜಂಗಮ ಲಿಂಗಗಳಿಗೆ ಚಲಲಿಂಗ ಹಾಗೂ ಚಲಾಚಲ ಲಿಂಗಗಳೆಂದೂ ಕರೆಯುತ್ತಾರೆ. ರಸವೈದ್ಯ ಪರಿಣಿತರು ಪಾದರಸದಿಂದ ಲಿಂಗಗಳನ್ನು ಮಾಡಿ ಪೂಜಿಸುತ್ತಿದ್ದರು. ಈ ಲಿಂಗಗಳನ್ನು ಬೇಕಾದ ಸ್ಥಳಕ್ಕೆ ಒಯ್ಯಲು ಸಾಧ್ಯವಾಗುತ್ತಿದ್ದುದರಿಂದ ಇವುಗಳಿಗೆ ಚಲಾಚಲ ಲಿಂಗವೆನ್ನುತ್ತಿದ್ದರು.

ಲಿಂಗವನ್ನು ಶೈವರು ಮೈಮೇಲೆ ಧರಿಸುವ ಸಂಪ್ರದಾಯವಿದೆ. ಕೊರಳಲ್ಲಿ, ತಲೆಯ ಮೇಲೆ, ಭುಜಗಳ ಮೇಲೆ ಲಿಂಗವನ್ನು ಬಟ್ಟೆಯಲ್ಲಿ ಸುತ್ತಿ ಇಲ್ಲವೆ ಸಂಪುಟದಲ್ಲಿಟ್ಟುಕೊಂಡು ಧರಿಸುವರು. ಶಿವಲಿಂಗದ ನಿರಂತರ ಸಂಪರ್ಕದಿಂದ ಶಿವಯೋಗ ಲಭಿಸುವುದೆಂಬ ನಂಬಿಕೆಯೇ ಲಿಂಗ ಧಾರಣಕ್ಕೆ ಕಾರಣ. ಶಿಲ್ಪದಲ್ಲಿ ಪಡಿಮೂಡಿರುವ ದೇವ ವಿಗ್ರಹಗಳ ಶಿರ ಹಾಗೂ ಕಿರೀಟದ ಮೇಲೆಯೂ ಲಿಂಗ ಧರಿಸುವುದು ಕಂಡುಬರುತ್ತದೆ. ಭಾರವಾದ ಲಿಂಗಗಳನ್ನು ತಲೆಯ ಮೇಲೆ ಹೊತ್ತುಕೊಂಡು ತಿರುಗುವ ವಾಡಿಕೆ ಇತ್ತೆಂದು ವಾಕಾಟಕರ ಶಿಲ್ಪಕಲೆ ಬಿಂಬಿಸುತ್ತದೆ. ಇವರನ್ನು ಭಾರಶಿವವೆನ್ನುವರು. ಶಿವನೂ ಸಹ ತನ್ನ ಕೊರಳಲ್ಲಿ ಲಿಂಗ ಧರಿಸುತ್ತಿದ್ದನೆಂಬುದು ಶಿಲ್ಪಕಲೆಯಿಂದಲೇ ವ್ಯಕ್ತವಾಗುತ್ತದೆ.

ಶಿವನನ್ನು ವ್ಯಕ್ತಿರೂಪದಲ್ಲಿ ಪೂಜಿಸಬಾರದು. ಅವನನ್ನು ಲಿಂಗರೂಪದಲ್ಲಿಯೇ ಪೂಜಿಸಬೇಕೆಂದು ಭೃಗುಮುನಿಯು ನೀಡಿರುವ ಶಾಪ ಪುರಾಣದಲ್ಲಿ ಉಲ್ಲೇಖವಾಗಿದೆ. ದೇವ ಸಮೂಹದಲ್ಲಿ ಯಾವ ದೇವರು ಶ್ರೇಷ್ಠ ಎಂದು ಶಿವನೆಡೆಗೆ

ಭೃಗುಮುನಿಯು ಕೇಳಲು ಹೋದಾಗ ಪರಶಿವನು ತನ್ನ ಪತ್ನಿಯಾದ ಪಾರ್ವತಿಯೊಡನೆ ಸರಸಸಲ್ಲಾಪ ಮಾಡುತ್ತಿದ್ದನು. ಮುನಿಯ ಆಗಮನವನ್ನು ಶಿವನು ಕಡೆಗಣಿಸಿದನು. ಸಿಟ್ಟಿಗೆದ್ದ ಭೃಗುಮುನಿ ನಿನ್ನನ್ನು ನಿಜ ರೂಪದಲ್ಲಿ ಜನರು ಎಂದೂ ಪೂಜಿಸದಿರಲಿ, ನಿನಗೆ ಲಿಂಗ ರೂಪದಲ್ಲಿಯೇ ಪೂಜೆ ಸಲ್ಲಲಿ ಎಂದು ಶಾಪವಿತ್ತನಂತೆ. ಅಂದಿನಿಂದ ಲಿಂಗಕ್ಕೆ ನೀಡಿರುವ ಪೂಜೆ ಹಾಗೂ ಅಭಿಷೇಕಗಳು ಶಿವನಿಗೆ ಸಲ್ಲಿಸಿದಂತಾಗುತ್ತದೆ. ಶಿವನನ್ನು ಲಿಂಗರೂಪದಲ್ಲಿ ಪೂಜಿಸುವಂತೆ ಬಸವನ ರೂಪದಲ್ಲಿಯೂ ಆರಾಧಿಸುತ್ತಾರೆ. ನಂದಿ ಶಿವನ ವಾಹನ. ಶಿವನನ್ನು ವೃಷಭಧ್ವಜ ಹಾಗೂ ವೃಷಕೇತನವೆಂದೂ ಕರೆಯುತ್ತಾರೆ. ಬಸವನ ಬೆನ್ನಿನ ಮೇಲಿರುವ ಗೂಡು ಲಿಂಗಾಕಾರದಲ್ಲಿ ಇರುವುದರಿಂದಲೇ ಬಸವನು ಪೂಜನೀಯ ಎಂಬ ನಂಬಿಕೆ ಇದೆ. ಕುಶಾನರು, ಶಿವ ಹಾಗೂ ಅವನ ವಾಹನವಾದ ನಂದಿಯ ಆರಾಧಕರಾಗಿದ್ದರು. ಅವರ ಕಾಲದ ಚಿನ್ನದ ನಾಣ್ಯದಲ್ಲಿ ಶಿವನು ನಂದಿಯ ಸಾಥಿಯಾಗಿರುವುದನ್ನು ಟಂಕಿಸಲಾಗಿದೆ.

**ನಾಟ್ಯ ಭೈರವ**

ನೃತ್ಯ ಭಂಗಿಯ ಶಿವನನ್ನು ಆರಾಧಿಸುತ್ತಾರೆ. ಶಿವನ ನೃತ್ಯ ರೂಪ ಮೂರ್ತಿಗೆ ತಾಂಡವೇಶ್ವರ ಇಲ್ಲವೇ ನಟರಾಜ ಎನ್ನುವರು. ನಟರಾಜನ ಪೂಜಾರಿಗಳಿಗೆ ದೀಕ್ಷಿತರು ಎನ್ನುವರು. ನಟರಾಜನನ್ನು ಆರಾಧಿಸುವುದು ತಮ್ಮ ದೈವಿಕ ಹಕ್ಕೆನ್ನುವುದು ಇವರ ಪ್ರತಿಪಾದನೆ. ನಟರಾಜನು ಪಾದವೂರಿರುವ ಚಿದಂಬರ ಚೋಳ ದೊರೆಗಳ ಕುಲಕ್ಷೇತ್ರವಾಗಿತ್ತು. ಚಿದಂಬರ ದೇವಾಲಯದಲ್ಲಿ ಅನ್ಯ ಶಿವಾಲಯಗಳಲ್ಲಿರುವಂತೆ ಲಿಂಗವಿಲ್ಲ. ಗರ್ಭಗೃಹದ ಬರಿದಾದ ಗೋಡೆಯ ಮೇಲೆ ಚಕ್ರವೊಂದು ಕಂಗೊಳಿಸುತ್ತದೆ. ಇದು ಆಕಾಶಲಿಂಗವೆಂಬ ಪ್ರತೀತಿಯನ್ನು ಹೊಂದಿದೆ. ಇದರ ಮುಂದೊಂದು ತೆರೆಯಿದೆ. ಪೂಜಾಕಾಲದಲ್ಲಿ ಇದನ್ನು ಸ್ಮರಿಸುತ್ತಾರೆ. ಇದು ಚಿದಂಬರ ರಹಸ್ಯ ಎಂದು ಹೆಸರುವಾಸಿಯಾಗಿದೆ. ತೆರೆಯ ಮುಂಭಾಗದಲ್ಲಿ ನಾಟ್ಯಮಾಡುವ ನಟರಾಜನ ಮೂರ್ತಿ ಇದೆ. ವ್ಯಾಘ್ರ ಪಾದ ಹಾಗೂ ಪತಂಜಲಿ ಮುನಿಯನ್ನು ಶಿವನು ಅನುಗ್ರಹಿಸಲು ಹೀಗೆ ಇಲ್ಲಿ ನರ್ತಿಸಿದನೆಂಬ ಪೌರಾಣಿಕ ಕಥೆಯಿದೆ. ಬಾದಾಮಿ, ಎಲ್ಲೋರ, ಐಹೊಳೆ ಹಾಗೂ ಉದಯಗಿರಿಗಳಲ್ಲಿ ನಟರಾಜನ ವಿಗ್ರಹಗಳಿವೆ. ತಮಿಳುನಾಡಿನ ಪಲ್ಲವ ದೊರೆಗಳು ಹಲವೆಡೆಯಲ್ಲಿ ನಟರಾಜನ ವಿಗ್ರಹವನ್ನು ಕಡೆದಿರುವರು.

ಶಿವನ ಲೀಲೆಗಳನ್ನು ಬಿಂಬಿಸುವ ಮೂರ್ತಿಗಳಲಿ ಅರ್ಧ ನಾರೀಶ್ವರಮೂರ್ತಿ ಅತ್ಯಂತ ಸೊಗಸಾಗಿದೆ. ಇದರಲ್ಲಿ ಪಾರ್ವತಿ ಪರಮೇಶ್ವರ ಸಂಯೋಜನೆ ಇದೆ. ಮತ್ಸ್ಯ ಪುರಾಣದಲ್ಲಿ ಅರ್ಧನಾರೀಶ್ವರ ಪ್ರತಿಮೆಯ ಲಕ್ಷಣಗಳನ್ನು ವಿವರಿಸಲಾಗಿದೆ. ಕೆಲ ಶಿಲ್ಪಗಳಲ್ಲಿ ಶಿವನ ಹತ್ತಿರ ವೃಷಭವನ್ನು ಹಾಗೂ ಪಾರ್ವತಿಯ ಹತ್ತಿರ ಸಿಂಹವನ್ನು ಕಡೆದು ನಿಲ್ಲಿಸಲಾಗಿದೆ.

ಕೆಲವು ಶಿವಾಲಯಗಳಲ್ಲಿ ಚಂಡೇಶ್ವರನ ಮೂರ್ತಿ ಕಂಡುಬರುತ್ತದೆ. ಚಂಡೇಶ್ವರ ಶಿವನ ಪರಮಭಕ್ತ. ತನ್ನ ತಂದೆ ಶಿವಲಿಂಗವನ್ನು ಕಾಲಿನಿಂದ ಒದೆದುದಕ್ಕಾಗಿ ಅವನ ಕಾಲನ್ನು ಕೊಡಲಿಯಿಂದ ಕಡಿದು ಹಾಕಿದನು. ಚಂಡೇಶ್ವರನ ಭಕ್ತಿಗೆ ಮೆಚ್ಚಿದ ಶಿವ ತನ್ನ ಕೊರಳ ಮಾಲೆಯನ್ನು ಚಂಡೇಶ್ವರನಿಗೆ ನೀಡುತ್ತಾನೆ. ತನ್ನ ಮನೆಯ ಕೆಲಸಗಳನ್ನು ನೋಡಿಕೊಳ್ಳಲು ನೇಮಿಸಿಕೊಳ್ಳುತ್ತಾನೆ ಎಂಬ ಕಥೆಯಿದೆ. ಇದಕ್ಕಾಗಿಯೇ ಅವನನ್ನು ಶಿವಾಲಯದಲ್ಲಿ ಚಂಡೇಶ್ವರನಿಗಾಗಿ ಪ್ರತ್ಯೇಕವಾದ ಕೋಣೆಯೆಂದು ಮೀಸಲಾಗಿರುವುದು. ಮೂರ್ತಿ ಅಸೀನ ಅರ್ಧ ನಿಂತಿರುವ ಭಂಗಿಯಲ್ಲಿರುವುದು.

ಹೀಗೆ ಲೋಕಕಲ್ಯಾಣಕಾರಕ, ಸಮಸ್ತರಿಗೂ ಮಂಗಳ ಉಂಟುಮಾಡುವ ಶಿವನನ್ನು ಲಿಂಗ, ನಂದಿ ಚಂಡೇಶ್ವರ, ನಾಟ್ಯ ಭೈರವ ಮುಂತಾದ ಹಲವು ರೂಪಗಳಲ್ಲಿ ಪೂಜಿಸುತ್ತಾರೆ.

ನಂಬಿಕೆ ಒಂದು ಕನ್ನಡಿಯಿದ್ದಂತೆ. ಒಮ್ಮೆ ಅದರ ಮೇಲೆ ಉಸಿರು ಬಿಟ್ಟಾಗ ಮಸುಕುಗೊಳ್ಳುತ್ತದೆ, ಒರೆಸಿದಾಗ ಮತ್ತೆ ಸ್ವಚ್ಛವಾಗುತ್ತದೆ. ಆದರೆ ಒಮ್ಮೆ ಅದು ಒಡೆದರೆ ಮತ್ತೆ ದುರಸ್ತಿ ಮಾಡಲಾಗದು.

-- ವಾಲ್ಟರ್ ಸ್ಕಾಟ್

ಇತರರ ತಪ್ಪುಗಳನ್ನು ದೊಡ್ಡ ದನಿಯಿಂದ ಹೇಳುವೆ. ನಿನ್ನ ತಪ್ಪುಗಳನ್ನು ಸದಾ ಮುಚ್ಚಿಡಲು ಯತ್ನಿಸುವೆ. ಮೊದಲು ನಿನಿ ತಪ್ಪುಗಳನ್ನು ಹೇಳಿ ಕ್ಷಮೆ ಬೇಡು. ಇತರರ ತಪ್ಪುಗಳ ಗೊಡವೆಗೆ ಎಂದೂ ಹೋಗಬೇಡ. ಹೋದರೆ ನೀನೇ ಆ ಬಲೆಯಲ್ಲಿ ಸಿಕ್ಕಿಕೊಳ್ಳಬಹುದು.

-- ಸ್ವಾಮಿ ಚೈತನ್ಯ





# ಕತ್ತಲು ಮತ್ತು ಬೆಳಕು

- ಬಸಪ್ಪ ಉಪ್ಪಾರ
ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ

ಕತ್ತಲು ಬೆಳಕನ್ನು ನುಂಗುವ ಹೊತ್ತು. ಇದಕ್ಕೆ 'ಮುಸ್ಸಂಜೆ' ಎಂದು ಹೇಳುತ್ತಾರೆ. ಈ ಮುಸ್ಸಂಜೆಯನ್ನು ಕವಿಗಳು ಬಹುವಾಗಿ ವರ್ಣಿಸುತ್ತಾರೆ. ಪಶು, ಪಕ್ಷಿ, ಪ್ರಾಣಿಗಳು ಗೂಡು ಸೇರುವ ಸಮಯವೆಂದು, ಪಡುವಣದ ಬಾನು ಕೆಂಬಣ್ಣದಿಂದ ತುಂಬಿ ತುಂಬಾ ಆಹ್ಲಾದಕರವಾಗಿರುತ್ತದೆಂದು ಹೇಳಿದ್ದಾರೆ. ಹಗಲೆಲ್ಲಾ ಎಚ್ಚರವಿದ್ದು ರಾತ್ರಿ ಗಿಡ-ಮರ, ಬಳ್ಳಿಗಳು ತಮ್ಮ ಎಲೆಗಳನ್ನು ಮುದುರಿಕೊಂಡು ನಿದ್ರಿಸುತ್ತವೆ. ಮೊಗ್ಗು ಅರಳಿ ಹೂವಾಗಲು ರಾತ್ರಿ (ಕತ್ತಲು) ಸಹಕರಿಸುತ್ತದೆ. ಗಿಡ, ಮರಗಳು ಚಿಗುರೊಡೆದು ಬೆಳೆಯಲು ರಾತ್ರಿಯೆ ಕೂಲಿಕಾರರು, ರೈತರು ಮತ್ತು ಶ್ರಮಜೀವಿಗಳು ದುಡಿದು ಹಗಲೆಲ್ಲಾ ದಣಿವಾಗುತ್ತಿದ್ದಂತೆ ವಿಶ್ರಾಂತಿಗಾಗಿ ರಾತ್ರಿಯ ಸಮಯಕ್ಕೆ ಕಾಯುತ್ತಿರುತ್ತಾರೆ.

ಪಶು, ಪಕ್ಷಿ, ಪ್ರಾಣಿಗಳಲ್ಲದೆ ಕ್ರಿಮಿಕೀಟಗಳು, ಮಾನವರಾದಿಯಾಗಿ ನಿದ್ರಿಸಿ ವಿಶ್ರಾಂತಿ ಪಡೆಯುವುದಕ್ಕಾಗಿ ಕತ್ತಲನ್ನು ಕಾಯುತ್ತಿರುತ್ತಾರೆ. ಕತ್ತಲು ಹೆಚ್ಚಾದಂತೆ ಜೀವಕೋಟಿ ಗಾಢವಾಗಿ ನಿದ್ರೆಯಲ್ಲಿ ಮುಳುಗಿರುತ್ತದೆ. ಅಲ್ಲೊಂದು ಇಲ್ಲೊಂದು ಕೆಲಪ್ರಾಣಿಗಳು ಕತ್ತಲಲ್ಲಿ ಆಹಾರ ಹುಡುಕುವುದಕ್ಕಾಗಿ ಕೆಲವು ಸಮಯಗಳು ಮಾತ್ರ ನಿದ್ರಿಸುವುದಿಲ್ಲ. ಆದರೆ ಇನ್ನೂ ಕತ್ತಲಿರುವಾಗಲೇ ತಮ್ಮ ಗೂಡು ಸೇರಿಕೊಳ್ಳುತ್ತವೆ. ಕತ್ತಲಲ್ಲಿ ಸಿಗುವ ಶಾಂತಿ, ವಿಶ್ರಾಂತಿಗಳು ಹಗಲಲ್ಲಿ ಸಿಗುವುದು ಸಾಧ್ಯವಿಲ್ಲ; ರಾತ್ರಿ ನಾವು ಮಲಗುವ ಮುನ್ನ ಝಗ ಝಗಿಸುವ ದೀಪದ ಬೆಳಕನ್ನು ಆರಿಸಿಬಿಡುತ್ತೇವೆ. ಬೆಳಕು ಬೇಕಾದರೆ ಕತ್ತಲು ಬೇಕಲ್ಲವೆ? ಕತ್ತಲಿದ್ದರೆ ತಾನೆ ಬೆಳಕಿನ ಮಹತ್ವ. "ತಮಸೋಮಾ ಜ್ಯೋತಿರ್ಗಮಯ" ಅಂದರೆ ಕತ್ತಲಿನಿಂದ ಬೆಳಕಿನೆಡೆಗೆ ಎಂದಾಗುತ್ತದೆ. ಆದರೆ, ವಿಶ್ರಾಂತಿ ಬಯಸಿ ನಿದ್ರಿಸಲು ನಾವು ಕತ್ತಲಿನೆಡೆಗೆ ಹೋಗುವುದು ಸಹಜ.

ವಿದ್ಯಾಭ್ಯಾಸ, ಯೋಗಾಭ್ಯಾಸಗಳನ್ನು ನಾವು ಬೆಳಗಿನ ಜಾವ ಸೂರ್ಯೋದಯಕ್ಕೆ ಮುನ್ನ ಪ್ರಶಸ್ತ ಕಾಲವೆಂದು ಮಾಡುತ್ತೇವೆ. ಇಂಥ ಸಮಯಕ್ಕೆ, ಬ್ರಾಹ್ಮೀ ಮುಹೂರ್ತವೆಂದು ಸ್ನಾನ-ಪೂಜಾದಿಗಳನ್ನು ವಿಧಿವತ್ತಾಗಿ ಮಾಡುತ್ತೇವೆ. ರಾತ್ರಿ ಊಟದ ನಂತರ ನಮ್ಮ ಜನಪದರು ಹಂತಿಹಾಡು, ಸಂಪ್ರದಾಯದ ಹಾಡು, ಸೋಬಾನದ ಹಾಡುಗಳನ್ನು ಹಾಡುತ್ತಾರೆ. ರಾತ್ರಿ ತಮ್ಮ ಓಣಿಯಲ್ಲಿ ಒಂದುಕಡೆ ಎಲ್ಲರೂ ಸೇರಿ ಕೋಲಾಟ, ಜಾತ್ರೆ, ಹಬ್ಬ, ಹರಿದಿನಗಳಲ್ಲಿ ದೇವರ ಮುಂದೆ ಹಾಡಿ ಕುಣಿದು, ಕುಪ್ಪಳಿಸುತ್ತಾರೆ.

ಕತ್ತಲನ್ನು (ಕಪ್ಪನ್ನು) ನಾವು ಹೀನಾಯವಾಗಿ ಕಾಣುತ್ತೇವೆ. ಹೆಣ್ಣು ಕಪ್ಪಾಗಿದೆಯೆಂದು ತಿರಸ್ಕರಿಸುತ್ತೇವೆ. ಕಪ್ಪಗಿದ್ದವರು ಸುಂದರವಲ್ಲವೆಂಬ ಭಾವನೆ ನಮ್ಮಲ್ಲಿ ಬಹಳವಾಗಿ ಬೆಳೆದು ಬಂದಿದೆ. ಕವಿಗಳು ಕಪ್ಪಗಿರುವ ಹೆಣ್ಣನ್ನು 'ಕಪ್ಪುಸುಂದರಿ' ಎಂದು ಕರೆದು ಕಪ್ಪಿನಲ್ಲೂ ಸುಂದರತೆಯನ್ನು ಕಂಡಿದ್ದಾರೆ ನಮ್ಮ ಕವಿಪುಂಗವರು. ಹಿಂದೆ ಋಷಿ ಮುನಿಗಳು ಯಜ್ಞಯಾಗಾದಿಗಳನ್ನು ರಾತ್ರಿ ಪ್ರಶಾಂತವಾದ ವಾತಾವರಣದಲ್ಲಿ ಮಾಡುತ್ತಿದ್ದ ಬಗ್ಗೆ ಪುರಾಣಗಳಲ್ಲಿ ಓದಿದ್ದೇವೆ.

ತಾಯಿಯ ಒಡಲಾಳದ ಕತ್ತಲಿನಿಂದ ಮಗು ಹುಟ್ಟಿ ಬಂದಿದ್ದರೂ ಪವಿತ್ರ ಭಾವನೆಗಳನ್ನು ಹೊತ್ತು ತಂದಿರುತ್ತದೆ. ಮುಂದೆ ಮಗು ಬೆಳಕಿನಲ್ಲಿ ಬೆಳೆಯುತ್ತದೆ. ಕತ್ತಲನ್ನು ಕಡೆಗಣಿಸಿ ಬರೀ ಬೆಳಕನ್ನೇ ಪ್ರೀತಿಸಬಾರದು. ಕತ್ತಲನ್ನು ಪ್ರೀತಿಸಿ ಬೆಳಕನ್ನೂ ಮರೆಯಬಾರದು. ಎರಡನ್ನೂ ಪ್ರೀತಿಸಬೇಕು. ಇದಕ್ಕೆ ಇರಬೇಕು ಶ್ರೀಕೃಷ್ಣ ಪರಾತ್ಮನು "ಸುಖ ದುಃಖಗಳನ್ನು ಸಮಾನವಾಗಿ ನೋಡು" ಎಂದು ಹೇಳಿರುವುದು. ಕತ್ತಲು ಮತ್ತು ಬೆಳಕು ಎರಡೂ ಸಮಾನವೆಂದು ಭಾವಿಸಬೇಕು. ಕತ್ತಲೆಯೆಂದರೆ ಮೂಗು ಮುರಿಯುವವರೇ ಜಾಸ್ತಿ.

ಮಿನುಗುವ ನಕ್ಷತ್ರಗಳನ್ನು ನಾವು ನೋಡಲು ಕತ್ತಲಿಗಾಗಿ ಕಾಯಲೇಬೇಕು. ಹಾಲಿನಂಥ ಬೆಳದಿಂಗಳ ತಂಪನ್ನು ಆಹ್ಲಾದಿಸಲು ನಾವು ಬೆಳಕನ್ನು ನೋಡಲು ಕತ್ತಲನ್ನು ಎದುರುನೋಡಲೇಬೇಕು. ಬೆಳಕು ಕತ್ತಲಿಗಾಗಿ ಕಾಯಬೇಕು. ಕತ್ತಲು ಬೆಳಕಿಗಾಗಿ ಕಾಯಬೇಕು. ಹೃದಯ ಉಳ್ಳವರು ಬೆಳಕನ್ನೂ ಪ್ರೀತಿಸುವಂತೆ ಕತ್ತಲನ್ನೂ ಪ್ರೀತಿಸುತ್ತಾರೆ. 'ಪ್ರೀತಿಯಿಲ್ಲದೆ ಗಿಡ, ಮರ, ಬಳ್ಳಿಗಳು ಚಿಗುರುವುದಿಲ್ಲ' ಎಂದು ಕವಿ ಹೇಳುತ್ತಾನೆ. ಪ್ರೀತಿಯಿಂದ ಎಲ್ಲವನ್ನೂ, ಎಲ್ಲರನ್ನೂ ಕಾಣಬೇಕು.

ಕತ್ತಲು ಅಜ್ಞಾನದ ಸಂಕೇತವಾದರೆ, ಬೆಳಕು ಸುಜ್ಞಾನದ ಸಂಕೇತ. ಕತ್ತಲು ನೋವು, ದುಃಖದ ಸಂಕೇತವಾದರೆ ಬೆಳಕು ಸುಖ ಸಂತೋಷದ ಸಂಕೇತ. ಕಾಲಚಕ್ರದಲ್ಲಿ ಹಗಲು ನಂತರ ಕತ್ತಲೆ, ಮತ್ತು ಕತ್ತಲೆ ನಂತರ ಹಗಲು ಬರಲೇಬೇಕು, ಇದು ಪ್ರಕೃತಿಯ ನಿಯಮ. ಕತ್ತಲು ಬೆಳಕು ಜೀವನಕ್ಕೆ ಯಾವುದೂ ಶಾಶ್ವತವಲ್ಲ ಎಂಬ ದಿವ್ಯ ಸದೇಶವನ್ನು ನೀಡುತ್ತವೆ.

# ನೆಲಮಂಗಲದಲ್ಲಿ ಪ್ರಥಮ ತಾಲ್ಲೂಕು ಶರಣ ಸಾಹಿತ್ಯ ಸಮ್ಮೇಳನ

ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ : ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ದೇಗುಲಮಠದ ಶ್ರೀಶ್ರೀಗಳು, ಸುತ್ತೂರು ಶ್ರೀಶ್ರೀಗಳು, ವೈದ್ಯಕೀಯ ಶಿಕ್ಷಣ ಸಚಿವ ಡಾ. ಎಂ. ಶಂಕರ್ ನಾಯಕ್, ಗ್ರಾಮೀಣಾಭಿವೃದ್ಧಿ ಮತ್ತು ವಾರ್ತಾ ಸಚಿವರಾದ ಶ್ರೀ ಎಂ.ಪಿ. ಪ್ರಕಾಶ್, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರನ್ನು ಕಾಣಬಹುದು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ನೆಲಮಂಗಲ ತಾಲ್ಲೂಕು ಘಟಕ; ಬಸವಜಯಂತಿ ಪ್ರಯುಕ್ತ ಮೇ ೧೬ರಂದು ಪ್ರಥಮ ಶರಣ ಸಾಹಿತ್ಯ ಸಮ್ಮೇಳನ ನೆಲಮಂಗಲದ ಶ್ರೀ ಪವಾಡ ಬಸವಣ್ಣದೇವರ ಮಠದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನಿಧ್ಯದಲ್ಲಿ ನಡೆಯಿತು. ಕಾರ್ಯಕ್ರಮ ಶ್ರೀ ಮಹಂತೇಶ್ವರ ಗದ್ದುಗೆ ಮಠದ ಪರಮಪೂಜ್ಯ ಶ್ರೀ ಶ್ರೀ ಮಹಂತ ಸ್ವಾಮಿಗಳವರ ಧ್ವಜಾರೋಹಣದೊಂದಿಗೆ ಪ್ರಾರಂಭವಾಯಿತು.

ಸಮ್ಮೇಳನವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರಾದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ಸಾಧು-ಸಂತರ ದಿವ್ಯ ಸಂದೇಶಗಳನ್ನು ಸಾರುವ ಕಾರ್ಯ ಶರಣ ಸಾಹಿತ್ಯ ಪರಿಷತ್ತಿನಿಂದ ನಿರಂತರವಾಗಿ ನಡೆಯಬೇಕು" ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಗ್ರಾಮೀಣಾಭಿವೃದ್ಧಿ ಹಾಗೂ ವಾರ್ತಾ ಸಚಿವರಾದ ಶ್ರೀ ಎಂ.ಪಿ. ಪ್ರಕಾಶ್ ಅವರು ಈ ಸಂದರ್ಭದಲ್ಲಿ ಮಾತನಾಡಿ "ಬಸವ ಜಯಂತಿ ಅಂಗವಾಗಿ ಎಲ್ಲಾ ಮಹನೀಯರ ಜಯಂತಿಗಳನ್ನು ಆಚರಿಸಬೇಕು. ಅವರು ನೀಡಿದ ಸಂದೇಶಗಳನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು.





ಸಾಹಿತ್ಯಾಭಿಮಾನಿಗಳು

ಸಮಾಜದ ಒಳಿತಿಗಾಗಿ ಪ್ರತಿಯೊಬ್ಬರೂ ಶಿಕ್ಷಣ ಪಡೆದು ಕ್ರಿಯಾಶೀಲವಾಗಿ ಕಾಯಕದಲ್ಲಿ ತೊಡಗಬೇಕು" ಎಂದು ತಿಳಿಸಿದರು.

ಬೇಲಿಮಠದ ಶಿವಾನುಭವ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರು ಮತ್ತು ದೇಗುಲ ಮಠದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಶರಣ ಸಾಹಿತ್ಯ ಹಾಗೂ ಅದರ ಮಹತ್ವವನ್ನು ಕುರಿತು ಸೋದಾಹರಣ ವಾಗಿ ಉಪನ್ಯಾಸ ನೀಡಿದರು.

ಮುಖ್ಯ ಅತಿಥಿಗಳಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿ ಪ್ರೊ. ಕೆ. ಸಿದ್ದಪ್ಪ, ತೆಂಗುನಾರು ಅಭಿವೃದ್ಧಿ ಮಂಡಳಿಯ ಅಧ್ಯಕ್ಷ ಡಾ. ಸಿ. ಜಯಣ್ಣ ಅವರು ಬಸವಣ್ಣನವರು ನಡೆಸಿದ ಕ್ರಾಂತಿ ಹಾಗೂ ಅವರು ಸಮಾಜಕ್ಕೆ ನೀಡಿದ ಉನ್ನತ ಮೌಲ್ಯಗಳನ್ನು ಕುರಿತು ಮಾತನಾಡಿದರು.

ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ವೈದ್ಯಕೀಯ ಶಿಕ್ಷಣ ಸಚಿವ ಡಾ. ಎಂ. ಶಂಕರ್‌ನಾಯಕ್ ಅವರು ವಹಿಸಿದ್ದರು. ಶ್ರೀ ಪವಾಡ ಬಸವಣ್ಣ ದೇವರ ಮಠದ ಶ್ರೀ ಶ್ರೀ ಸದಾಶಿವ ಮಹಾಸ್ವಾಮಿಗಳು ಪ್ರಾಸ್ತಾವಿಕ ಭಾಷಣದಲ್ಲಿ "ಮನೆ ಮನೆಗೂ ಶರಣರ ಸಂದೇಶ ಮುಟ್ಟಿಸುವ ಕೆಲಸ ಇಂದು ಆಗಬೇಕಾಗಿದೆ" ಎಂದು ಹೇಳಿದರು.

ಸಮಾರಂಭದ ದಿವ್ಯ ಸಾನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನ ಸಂದೇಶದಲ್ಲಿ, "ಮಾನವ ಅನಾಗರಿಕತೆ ಬಿಟ್ಟು ಆಚಾರವಂತನಾಗಬೇಕು" ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಮಾಜಿ ಶಾಸಕ ಶ್ರೀ ಸಿ. ವೀರಭದ್ರಯ್ಯ, ಸ್ವಾಗತ ಸಮಿತಿ ಅಧ್ಯಕ್ಷ ಶ್ರೀ ಹೆಚ್.ಆರ್. ಕೆಂಪಣ್ಣ ಅವರು ಮಾತನಾಡಿದರು.

ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ. ಬಿ.ಸಿ. ವೀರಪ್ಪ ಕಾರ್ಯಕ್ರಮ ನಿರ್ವಹಿಸಿದರು.

ಮಧ್ಯಾಹ್ನ ನಡೆದ ಚಿಂತನಗೋಷ್ಠಿಯಲ್ಲಿ **'ಜನಪದರು ಕಂಡ ಬಸವಣ್ಣ'**ನವರನ್ನು ಕುರಿತು ಪ್ರೊ. ಹೆಚ್.ವಿ. ವೀರಭದ್ರಯ್ಯ, **'ಶರಣರು ಮತ್ತು ಸಮಾಜವಾದ'**ವನ್ನು ಕುರಿತು ಶ್ರೀ ಟಿ.ಆರ್. ಮಹಾದೇವಯ್ಯ ಅವರು ಉಪನ್ಯಾಸ ನೀಡಿದರು. ಗೋಷ್ಠಿಯನ್ನು ಡಾ. ಎಂ. ಚಂದ್ರಪ್ರಸಾದ್ ಅವರು ನಿರ್ವಹಿಸಿದರು.

ನಂತರ ನಡೆದ ಸಮಾರೋಪ ಸಮಾರಂಭ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನಿಧ್ಯದಲ್ಲಿ ನಡೆಯಿತು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ತಮ್ಮ ಸಮಾರೋಪ ಭಾಷಣದಲ್ಲಿ "ಶರಣರ ಜೀವನ ಸಂದೇಶ ಅನೇಕ ಸಮಸ್ಯೆಗಳಿಗೆ ಪರಿಹಾರ ನೀಡಬಲ್ಲುದು. ಭೌತಿಕ ಸಾಧನೆಯೊಂದಿಗೆ ನೈತಿಕ ಮೌಲ್ಯ ಹೆಚ್ಚಿಸುವುದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಉದ್ದೇಶ" ಎಂದು ತಿಳಿಸಿದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪವಾಡ ಬಸವಣ್ಣದೇವರ ಮಠದ ಶ್ರೀ ಶ್ರೀ ಸದಾಶಿವಸ್ವಾಮಿಗಳು ವಹಿಸಿದ್ದರು. ಕಂಬಾಳು ಮಠದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶಿವಾನಂದಾಶ್ರಮದ ಶ್ರೀ ಶ್ರೀ ಚಂದ್ರಶೇಖರ ಸ್ವಾಮಿಗಳು, ಕಂಚುಗಲ್ ಬಂಡೇಮಠ, ಚಿಕ್ಕಮಸ್ಕಲ್ ಮಠದ ಶ್ರೀಶ್ರೀಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀ ಎಂ.ಎ. ನಗಲೂರು ಅವರು ಕಾರ್ಯಕ್ರಮವನ್ನು ನಿರೂಪಿಸಿದರು.

ಸಮ್ಮೇಳನ ಯಶಸ್ವಿಯಾಗಲು ನೆಲಮಂಗಲದ ಶ್ರೀ ರುದ್ರೇಶ್ವರ ಸ್ವಾಮಿ ದೇವಾಲಯ ಟ್ರಸ್ಟ್, ಶ್ರೀ ಜಯದೇವ ಹಾಸ್ಟೆಲ್ ಟ್ರಸ್ಟ್, ಶ್ರೀ ಕವಾರಿ ಮಠದ ಶ್ರೀ ರುದ್ರೇಶ್ವರ ಸ್ವಾಮಿ ದೇವಾಲಯ ದತ್ತಿ ಸಮಿತಿ, ಬಸವೇಶ್ವರ ಯುವಕ ಸಂಘ ಹಾಗೂ ವೀರಶೈವ ಸಂಘಟನಾ ಸಮಿತಿಗಳು ನೀಡಿದ ಸಹಕಾರ ಸ್ಮರಣೀಯ.

# ಕುಂದರನಹಳ್ಳಿಯಲ್ಲಿ ಬಸವ ಜಯಂತಿ



ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ : ಶ್ರೀ ಎಸ್. ಮಹಾದೇವಯ್ಯ, ಪ್ರೊ. ಹೆಚ್.ವಿ. ವೀರಭದ್ರಯ್ಯ, ವಿದ್ವಾನ್ ಎಂ. ಶಿವಕುಮಾರಸ್ವಾಮಿ, ಶ್ರೀ ಹೆಚ್. ಗಂಗಾಧರನ್, ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಮಹಾಸ್ವಾಮಿಗಳು ಹಾಗೂ ಶ್ರೀ ಟಿ.ಆರ್. ಮಹಾದೇವಯ್ಯ ಅವರನ್ನು ಕಾಣಬಹುದು.

**ಮೇ** ೨೦ರಂದು ಗುಬ್ಬಿ ತಾಲ್ಲೂಕು ಕುಂದರನಹಳ್ಳಿ ಗ್ರಾಮದಲ್ಲಿ ಹಬ್ಬದ ವಾತಾವರಣ. ತಳಿರು ತೋರಣಗಳ ಸಿಂಗಾರ. ಸಂದರ್ಭ: ಪರಮಪೂಜ್ಯ ಡಾ. ಶ್ರೀ ಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ಬಸವ ಜಯಂತಿ ಉತ್ಸವ ಮತ್ತು ಬಸವ ಚಿಂತನದ ಸಮಾವೇಶ.

ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ "ದೇಶೀಯ ಧಾರ್ಮಿಕ ಪರಂಪರೆ ಮತ್ತು ಸಂಸ್ಕೃತಿ ಪ್ರಚಾರಕ್ಕೆ ಪಕ್ವವಾದ ಕಾಲವಾಗಿದೆ. ಪ್ರಸ್ತುತ ದಿನಗಳಲ್ಲಿ ವಿದೇಶಿ ಸಂಸ್ಕೃತಿ ಮತ್ತು ನಾಗರಿಕತೆಗಳ ವ್ಯಾಮೋಹ ಹೆಚ್ಚಾಗುತ್ತಿದ್ದು ಯುವಪೀಳಿಗೆ ಇದರ ಬಗ್ಗೆ ಆಕರ್ಷಿತವಾಗುತ್ತಿದೆ" ಎಂದು ವಿಷಾದಿಸಿದರು. "ಜಗತ್ತಿನ ಎಲ್ಲಾ ಧರ್ಮಗಳು ಮಾನವನ ಪ್ರಗತಿಗೆ ಮತ್ತು ಅಭ್ಯುದಯಕ್ಕೆ ಶ್ರಮಿಸಿರುವುದು ನಿದರ್ಶನ ವಾಗಿರುವುದರಿಂದ ಮಾನವತಾ ಸಮಾನ ಧರ್ಮವೇ ಶ್ರೇಷ್ಠ" ವೆಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಾಜಿ ಲೋಕಸಭಾ ಉಪಾಧ್ಯಕ್ಷ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಅವರು ಮಾತನಾಡಿ







ಪರಮಪೂಜ್ಯ ಶ್ರೀಶ್ರೀಗಳವರನ್ನು ಸಮಾರಂಭಕ್ಕೆ ಬರಮಾಡಿಕೊಳ್ಳುತ್ತಿರುವುದು.

"ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ನೀರಾವರಿ ಯೋಜನೆ ಗಳಿಗೆ ಆದ್ಯತೆ ನೀಡಬೇಕು" ಎಂದು ಆಗ್ರಹಪಡಿಸಿದರು. ಈ ಶತಮಾನದ ಅಂತ್ಯದ ವೇಳೆಗೆ ಬಚಾವತ್ ತೀರ್ಪಿನಂತೆ ನೀರಾವರಿ ಯೋಜನೆ ಅನುಷ್ಠಾನವಾಗ ಬೇಕು ಎಂದು ಒತ್ತಾಯಿಸಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು "ಬಸವಣ್ಣನವರ ನೇತೃತ್ವದಲ್ಲಿ ನಡೆದ ವಚನಕ್ರಾಂತಿ ಜಗತ್ತಿನ ಮಹತ್ವದ ಘಟನೆಗಳಲ್ಲಿ ಒಂದಾಗಿದ್ದು, ಮನುಷ್ಯನನ್ನು ಪ್ರೀತಿಸುವ ಮೂಲಕ ಧರ್ಮದ ಉದ್ಧಾರ ಸಾಧ್ಯ" ಎಂದು ತಿಳಿಸಿದರು. ಜನಪದ ಸಾಹಿತಿ ಪ್ರೊ. ಹೆಚ್.ವಿ. ವೀರಭದ್ರಯ್ಯ ಹಾಗೂ ಶ್ರೀ ಸಿ.ಕೆ. ಪರಶುರಾಮಯ್ಯ ಅವರು ಶರಣಧರ್ಮ ಕುರಿತು ಉಪನ್ಯಾಸ ನೀಡಿದರು.

ಇದೇ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಶ್ರೀ ಹೆಚ್. ಗಂಗಾಧರನ್, ವಿದ್ವಾನ್ ಎಂ. ಶಿವಕುಮಾರಸ್ವಾಮಿ, ಶ್ರೀ ವಿ.ಎಸ್. ರೆಡ್ಡಿ, ಶ್ರೀ ಟಿ.ಆರ್. ಮಹಾದೇವಯ್ಯ, ಶ್ರೀ ಜಿ.ಎಸ್. ಪರಮಶಿವಯ್ಯ, ಶ್ರೀ ಸಾಗರನಹಳ್ಳಿ ರೇವಣ್ಣ, ಶ್ರೀ ಕೆ.ಆರ್. ಶಿವಣ್ಣ ಅವರಿಗೆ ಶಾಲು ಹೊದಿಸಿ, ಫಲತಾಂಬೂಲ ನೀಡಿ ಸನ್ಮಾನಿಸಲಾಯಿತು.

ನಂತರ ನಡೆದ ಗೋಷ್ಠಿಯಲ್ಲಿ ತುಮಕೂರು ಹಿರೇಮಠಾಧ್ಯಕ್ಷ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು ಮಾತನಾಡಿ, "ಧರ್ಮದ ಬಗ್ಗೆ ನಂಬಿಕೆ ಉಂಟಾದರೆ ಮಾತ್ರ ಧಾರ್ಮಿಕ ಭಾವನೆ ಬರಲು ಸಾಧ್ಯ" ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲೆಯ ನೀರಾವರಿ ತಜ್ಞ ನಿವೃತ್ತ ಇಂಜಿನಿಯರ್ ಶ್ರೀ ಜಿ.ಎಸ್. ಪರಮಶಿವಯ್ಯ ಅವರು ಬರೆದ

(ಮುಂದಿನ ಪುಟಕ್ಕೆ)

# ದೇವರು ಎಲ್ಲಿದ್ದಾನೆ?

- ಟಿ.ಎಸ್. ವೆಂಕಟಾಚಲಯ್ಯ,
ತುಮಕೂರು

ಆತ್ಮ ಅಥವಾ ದೇವರು ಎಂಬುದು ಪ್ರಪಂಚದ ಒಳಗೂ ಹೊರಗೂ ಮತ್ತು ಎಲ್ಲಾ ಜೀವಿಗಳಲ್ಲೂ ಏಕರಸವಾಗಿ ಹರಿಯುವ ಚೈತನ್ಯ, ತೇಜಸ್ಸು, ಸತ್ವಶಕ್ತಿಯಾಗಿದೆ.

ಅದರ ಮಹಿಮೆಗೆ ಒಳಪಡದ ವಸ್ತುವು ಪ್ರಪಂಚದಲ್ಲಿ ಯಾವುದೂ ಇಲ್ಲ. 'ತೇನವಿನಾತೃಣಮಪಿನಚಲಶಿ'. ಎಲ್ಲಾ ಮನುಷ್ಯನ ವ್ಯಾಪಾರಗಳೂ ಅದಕ್ಕೆ ಅಧೀನವಾದವು. ಹೀಗೆ ದೇವರ ನಿಜ ಸ್ವರೂಪ, ಸತ್, ಚಿತ್ ಆನಂದವಾಗಿರುತ್ತದೆ. ಅದಕ್ಕೆ ಸರ್ವೇಶ್ವರ, ಸರ್ವಶಕ್ತ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿದ್ದಾನೆ.

ಸತ್ಯದ, ಜ್ಞಾನದ, ಸೌಂದರ್ಯದ ಗಣಿ ಅವನು. ನಾವು ಕಲ್ಪಿಸಿರುವ ಮತ್ತು ಕಲ್ಪಿಸಲಾಗದ ಎಲ್ಲಾ ಸದ್ಗುಣಗಳ ಪರಿಪೂರ್ಣ ಮೂರ್ತಿಯೇ ಅವನು. ಭಕ್ತಿಪ್ರಿಯ (ಭಕ್ತಿಪ್ರಿಯಃ ಶಿವಃ) ಶರಣಾಗತಿಯಿಂದ ಅವನನ್ನು ಒಲಿಸಿಕೊಳ್ಳುವುದು ಸುಲಭ. ಅವನು ಒಲಿದರೆ ನಮ್ಮ ಜೀವನವು ಸಾರ್ಥಕ. ಜಗತ್ತಿನ ಜೀವಿಗಳ ಮೇಲೆ ದೇವರಿಗೆ ಅತೀವ ಕರುಣೆ. ಜತ್ತಿನ ಸೃಷ್ಟಿಯಲ್ಲಿ ಜೀವಿಗಳ ಉದ್ಧಾರಕ್ಕಾಗಿ ಈ ಜಗತ್ತಿನ ಗರಡಿಯಲ್ಲಿ ಪಳಗಿ ಜೀವಿಗಳು ಕ್ರಮೇಣ ಪರಿಪೂರ್ಣರಾಗಲೆಂದು ಜೀವಿಗಳ ಪುಣ್ಯ ಪಾಪಗಳಿಗೆ ತಕ್ಕ ಫಲವನ್ನು ಕೊಡುವವನೂ ದೇವರೇ. ಅವನು ಸಾಕಾರನೂ ಹೌದು, ನಿರಾಕಾರನೂ ಹೌದು. ಅಷ್ಟೇ ಅಲ್ಲ ದುಷ್ಟ ಶಿಕ್ಷಣ, ಶಿಷ್ಟ ಸಂರಕ್ಷಣ ಮತ್ತು ಧರ್ಮ ಸಂಸ್ಥಾಪನೆಗಾಗಿ ಅವನು ಈ ಮರ್ತ್ಯಲೋಕದಲ್ಲಿ ಅವತಾರವೆತ್ತಬಲ್ಲನು.

ಶಾಂತಿ ಸಮಾಧಾನ, ಸುಖಜೀವನಗಳಿಗೆ ಸುಲಭದ ಮಾರ್ಗವೆಂದರೆ ಜಪ ಮತ್ತು ಧ್ಯಾನ ಮುಖ್ಯವಾದದ್ದು.

ಜ ಎಂದರೆ ಜನ್ಮ ಜನ್ಮಾಂತರದಲ್ಲಿ ಮಾಡಿದ ಪ ಎಂದರೆ ಪರಿಹರಿಸುವುದು ಎಂದರ್ಥ.

ಧ್ಯಾನಎಂದರೆ ತಮಗಿಷ್ಟವಾದ ಒಂದೇ ದೇವರಲ್ಲಿ ಸಂಪೂರ್ಣವಾಗಿ ಮನಸ್ಸನ್ನು ಮಾಡಿ ಬೇರೆ ಕಡೆ ಮನಸ್ಸು ಹೋಗದಂತೆ ತಡೆಗಟ್ಟಿ ತದೇಕದೃಷ್ಟಿ ಅಥವ ಏಕಚಿತ್ತದಿಂದ ಒಂದೇ ಗುರಿಯಿಟ್ಟು ಶಿವನ ಭಾವಚಿತ್ರದೊಂದಿಗೆ ಮಾತ್ರ ಸದಾ ಚಿಂತಿಸುತ್ತಿರಬೇಕು.

೧. ಓಂ ನಮಃ ಶಿವಾಯ (ಪಂಚಾಕ್ಷರಿ ಮಂತ್ರ)
೨. ಓಂ ನಮೋ ಭಗವತೇ ಶಿವಾನಂದಾಯ (ದ್ವಾದಚಾಕ್ಷರೀ ಮಂತ್ರ)

ಹಿಂದಿನ ಯುಗದಲ್ಲಿ ಮನುಷ್ಯನು ತಾನು ಮಾಡಿದ ಪಾಪ ಪುಣ್ಯಗಳನ್ನು ಕಳೆಯಲು, ಯಾಗ, ಯಜ್ಞಗಳನ್ನು ಮಾಡಬೇಕಾಗಿತ್ತು. ಆದರೆ ಈ ಕಲಿಯುಗದಲ್ಲಿ ನಾಮ ಸ್ಮರಣೆಯೊಂದೇ ಸಾಕು. ಅದಕ್ಕೆ ಸಾಧುಗಳ ಒಂದು ಉಕ್ತಿ ಇದೆ. ಏನೆಂದರೆ,

"ನಾಮಸ್ಮರಣಾದನ್ಯೋಪಾಯಂ ನ ಹಿಪಸ್ಯಾಮೋ ಭವಕರಣೇ"

## ಕುಂದರನಹಳ್ಳಿಯಲ್ಲಿ ಬಸವ ಜಯಂತಿ.....

(ಹಿಂದಿನ ಪುಟದಿಂದ)

"ಕರ್ನಾಟಕ ಸಮಗ್ರ ನೀರಾವರಿ ಯೋಜನೆಗಳು" ಗ್ರಂಥವನ್ನು ಮಾಜಿ ಸಂಸತ್ ಸದಸ್ಯ ಶ್ರೀ ಜಿ.ಎಸ್. ಬಸವರಾಜು ಅವರು ಬಿಡುಗಡೆ ಮಾಡಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ "ಹೇಮಾವತಿ ಕಾಮಗಾರಿಗೆ ರಾಜ್ಯ ಸರ್ಕಾರ ಹೆಚ್ಚಿನ ನೆರವು ನೀಡಬೇಕು" ಎಂದು ಒತ್ತಾಯಿಸಿದರು. ಸಮಾರಂಭದಲ್ಲಿ ಶ್ರೀ ವೈ.ಕೆ. ರಾಮಯ್ಯ, ಶಾಸಕ ಶ್ರೀ ಬಿ. ನಂಜಾಮರಿ, ಶ್ರೀ ಕೆ.ಎಸ್. ರಾಜಣ್ಣ ಮೊದಲಾದ ಗಣ್ಯರು ಮಾತನಾಡಿದರು. ಶ್ರೀ ಕೆ.ಸಿ. ಚಂದ್ರಶೇಖರ್ ಅವರ ಸ್ವಾಗತದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಶಿವಪ್ಪ ಕಾರ್ಯಕ್ರಮ ನಿರೂಪಿಸಿದರು. ಕೊನೆಯಲ್ಲಿ ಶ್ರೀ ರಮೇಶ್ ವಂದಿಸಿದರು.





# ರಾಷ್ಟ್ರೀಯ ಕೃಷಿ ತಂತ್ರಜ್ಞಾನ ಪರಿಯೋಜನೆ

ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನಡಿ ಜಾರಿಗೊಂಡಿರುವ ರಾಷ್ಟ್ರೀಯ ಕೃಷಿ ತಂತ್ರಜ್ಞಾನ ಪರಿಯೋಜನೆ ವಿಶ್ವಬ್ಯಾಂಕ್‌ನ ಅಂತರರಾಷ್ಟ್ರೀಯ ಅಭಿವೃದ್ಧಿ ಏಜೆನ್ಸಿ (ಐಡಿಎ) ಹಾಗೂ ಭಾರತ ಸರ್ಕಾರದಿಂದ ಹಣಕಾಸನ್ನು ಪಡೆಯುತ್ತಿದೆ. ಈ ಯೋಜನೆ ನವೆಂಬರ್೧೯೯೮ರಿಂದ ಅನುಷ್ಠಾನಕ್ಕೆ ಬಂದಿದೆ. ಇದಕ್ಕಾಗಿ ೨೪೦ ಅಮೆರಿಕನ್ ಡಾಲರ್ (೧೦೧೩ ಕೋಟಿ ರೂ.) ದೊರಕಿದೆ.

ಈ ಪರಿಯೋಜನೆಯ ಉದ್ದೇಶ ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನ ಅಭಿವೃದ್ಧಿ ಕೃಷಿ ಪರಿಸರ ವ್ಯವಸ್ಥೆಯ ಸಂಶೋಧನೆಗೆ ನೆರವು ಹಾಗೂ ಕೃಷಿ ತಂತ್ರವಿಜ್ಞಾನ ವಿತರಣೆಯಲ್ಲಿ ಹೊಸ ಮಾರ್ಗೋಪಾಯಗಳನ್ನು ಅಭಿವೃದ್ಧಿಪಡಿಸುವುದು. ಕೃಷಿ ಮಾರುಕಟ್ಟೆಯ ವ್ಯವಸ್ಥಾಪನೆಯ ಬಗ್ಗೆಯೂ ಈ ಪರಿಯೋಜನೆ ಗಮನ ಹರಿಸಲಿದೆ. ವಿಶ್ವಾಸಾರ್ಹ ಮಾಹಿತಿಯನ್ನು ಒದಗಿಸಲು ಭೌಗೋಳಿಕ ಮಾಹಿತಿ ವ್ಯವಸ್ಥೆಯನ್ನು ರೂಪಿಸಲಾಗುವುದು.

ಪ್ರಾದೇಶಿಕ ತಂತ್ರಜ್ಞಾನ ಅಭಿವೃದ್ಧಿಗೆ ಸಂಬಂಧಿಸಿದ ಸಮಸ್ಯೆಗಳತ್ತ ಗಮನ ಹರಿಸುವುದರ ಜೊತೆಗೆ ಸಂಶೋಧನೆ ವಿಸ್ತರಣೆ - ಕೃಷಿಕರ ನಡುವಿನ ಕೊಂಡಿಯನ್ನು ಬಲಪಡಿಸಲಾಗುವುದು. ಕೃಷಿ ತಂತ್ರಜ್ಞಾನ ವ್ಯವಸ್ಥಾಪನಾ ಏಜೆನ್ಸಿಗಳನ್ನು ಪಂಜಾಬ್, ಹಿಮಾಚಲ ಪ್ರದೇಶ, ಒರಿಸ್ಸಾ, ಬಿಹಾರ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ೨೪ ಜಿಲ್ಲೆಗಳಲ್ಲಿ ಸ್ಥಾಪಿಸಲಾಗುವುದು. ಈ ಜಿಲ್ಲೆಗಳ ಗ್ರಾಮೀಣ ಜನತೆ ಮತ್ತು ಕೃಷಿ ಸಂಶೋಧನೆ ವಿಸ್ತರಣೆ, ಮಾರುಕಟ್ಟೆಯೊಂದಿಗೆ, ಸಾಮರಸ್ಯವನ್ನು ಉಂಟುಮಾಡುವತ್ತ ಈ ಪರಿಯೋಜನೆ ಗಣನೀಯ ಕಾರ್ಯ ಕೈಗೊಳ್ಳಲಿದೆ.

ವಿಶ್ವಬ್ಯಾಂಕಿನ ಈ ರೀತಿಯ ಯೋಜನೆ ಇದೇ ಪ್ರಥಮವಾಗಿದೆ. ಬೇಡಿಕೆಗಳಿಗೆ ಸ್ಪಂದಿಸುತ್ತಾ ಸ್ಥಳೀಯ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ಹಂತಗಳಲ್ಲಿ ಪೂರ್ಣದೃಷ್ಟಿಯ ಪರಿಹಾರಗಳನ್ನೊದಗಿಸುವುದು. ಈ ಪರಿಯೋಜನೆಯ ಗುರಿಯಾಗಿದೆ. ತಂತ್ರಜ್ಞಾನಕ್ಕೆ ಸಂಬಂಧಿಸಿದ ಆರ್ಥಿಕ ಸಮಸ್ಯೆಯನ್ನು ಈ ಪರಿಯೋಜನೆ ಬಹುಮಟ್ಟಿಗೆ ನೀಗಲಿದೆ.

**ಅರ್ಕ ಪಿತಾಂಬರ**

ಇದನ್ನು 'ಯುಡಿ ೧೦೨' ಮತ್ತು 'ಐ ಎಚ್ ಆರ್ ೩೯೬' ತಳಿಗಳಿಂದ ರೂಪಿಸಿದೆ. ಇದು ಹಳದಿ ಬಣ್ಣದ ಈರುಳ್ಳಿ ಗೋಳಾಕಾರದ ಗೆಡ್ಡೆಗಳುಳ್ಳ ಗಟ್ಟಿಯಾದ, ಮಧ್ಯಮ ಗಾತ್ರದ ಸಾಕಷ್ಟು ದಿನ ಕೆಡದಂತಿಡಬಹುದಾದ ಗೆಡ್ಡೆಗಳನ್ನು ನೀಡುವ ಈ ತಳಿಯಿಂದ ಹೆಕ್ಟೇರಿಗೆ೩೫ ಟನ್ ಇಳುವರಿ ಪಡೆಯಬಹುದು. ಇದನ್ನು೧೯೯೬ರಲ್ಲಿ ಕರ್ನಾಟಕದಲ್ಲಿ ಬಿಡುಗಡೆ ಮಾಡಲಾಗಿದೆ. ಅಮೆರಿಕ, ಜಪಾನ್ ಹಾಗೂ ಐರೋಪ್ಯ ದೇಶಗಳಿಗೆ ರಫ್ತು ಮಾಡಬಹುದು. ಹಳದಿ ಈರುಳ್ಳಿಯ ಬೇಡಿಕೆ ಇರುವ ಮಾರುಕಟ್ಟೆಗಳಿಗೆ ಇದನ್ನು ಸರಬರಾಜು ಮಾಡಿ ಹೆಚ್ಚು ವಿದೇಶಿ ವಿನಿಮಯ ಗಳಿಸಬಹುದಾಗಿದೆ. ನಾಸಿಕದಲ್ಲಿರುವ ರಾಷ್ಟ್ರೀಯ ತೋಟಗಾರಿಕಾ ಸಂಶೋಧನೆ ಮತ್ತು ಅಭಿವೃದ್ಧಿ ಪ್ರತಿಷ್ಠಾನವೂ ಈ ತಳಿಯನ್ನು ರಫ್ತಿನ ಅತ್ಯುತ್ತಮ ತಳಿಯೆಂದು ಗುರುತಿಸಿದೆ.

**ಅರ್ಕ ನಿಕೇತನ**

ತಿಳಿಗೆಂಪು ಗೆಡ್ಡೆಗಳನ್ನು ನೀಡುವ ಈ ತಳಿಯನ್ನು ಸ್ಥಳೀಯ ತಳಿಯಾದ ಐ.ಎಚ್.ಆರ್. ೧೫೩ ತಳಿಯಿಂದ ರೂಪಿಸಲಾಗಿದೆ. ಮಧ್ಯಮ ಗಾತ್ರದಿಂದ ಹಿಡಿದು ದಪ್ಪ ಈರುಳ್ಳಿ ಗೆಡ್ಡೆಗಳನ್ನು ನೀಡುವ ಈ ತಳಿ ರಫ್ತು ಅವಶ್ಯಕತೆಗಳನ್ನು ಪೂರೈಸಬಲ್ಲದು. ಹೆಚ್ಚು ದಿನ ಕೆಡದಂತೆಯೂ ಸಂಗ್ರಹಿಸಬಹುದು. ಇದನ್ನು ಮಳೆಗಾಲ ಹಾಗೂ ಮಾಗಿ ಕಾಲಗಳೆರಡರಲ್ಲೂ ಬೆಳೆಯಬಹುದು.

ಈ ತಳಿ ಹೆಕ್ಟೇರಿಗೆ ೩೭ರಿಂದ ೪೦ ಟನ್ ಇಳುವರಿ ನೀಡಬಲ್ಲದು. ಇದನ್ನು ಕರ್ನಾಟಕದಲ್ಲಿ೧೯೮೪ರಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ೧೯೮೭ರಲ್ಲಿ ಬಿಡುಗಡೆ ಮಾಡಲಾಯಿತು. ಉತ್ತರ ಪ್ರದೇಶ, ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ಕರ್ನಾಟಕದ ಈರುಳ್ಳಿ ಬೆಳೆಯುವ ಪ್ರದೇಶಗಳಲ್ಲಿ ಈ ತಳಿಯನ್ನು ಚೆನ್ನಾಗಿ ಬೆಳೆಯಬಹುದು.

### ಅರ್ಕ ಬಿಂದು

ಈ ತಳಿಯನ್ನು ಸ್ಥಳೀಯ ತಳಿ 'ಐ ಎಚ್ ಆರ್‌೪೦೨' ತಳಿಯಿಂದ ರೂಪಿಸಲಾಗಿದೆ. ಇದು ನಮ್ಮ ಅವಶ್ಯಕತೆಗಳನ್ನು ಪೂರೈಸಬಲ್ಲ ತಳಿ. ಇದರ ಗೆಡ್ಡೆಗಳು ಕಡುಗೆಂಪು ಗಾತ್ರ, ಸಣ್ಣ ಗಟ್ಟಿಯಾದ ಇದರ ಗೆಡ್ಡೆಗಳನ್ನು ಬಹಳ ದಿನ ಸಂಗ್ರಹಿಸಿಡಬಹುದು. ಇದನ್ನು೧೯೯೪ರಲ್ಲಿ ಕರ್ನಾಟಕದಲ್ಲಿ ಬೆಳೆಯಲು ಬಿಡುಗಡೆ ಮಾಡಲಾಗಿದೆ.

### ಕೃಷಿ ಸಂಶೋಧನೆಯಲ್ಲಿ ಭಾರತ ಮತ್ತು ಈಜಿಪ್ಟ್ ನಡುವೆ ಸಹಕಾರ ಒಪ್ಪಂದ

ಭಾರತದಲ್ಲಿರುವಂತೆಯೇ ಈಜಿಪ್ಟ್‌ನಲ್ಲಿಯೂ ಹವಾಗುಣ ಮತ್ತು ಪ್ರಾಕೃತಿಕ ಸಂಪನ್ಮೂಲಗಳಿವೆ. ವಿವಿಧ ತಳಿಗಳಲ್ಲೂ ಸಾಮ್ಯತೆ ಗಳಿವೆ. ಈಜಿಪ್ಟ್‌ನಲ್ಲಿ ಗೋಧಿ, ಮುಸುಕಿನ ಜೋಳ ಮತ್ತು ಹತ್ತಿಯಲ್ಲಿ ಅತ್ಯಧಿಕ ಇಳುವರಿ ಬರುತ್ತಿದೆ. ಕಬ್ಬು, ಹಣ್ಣುಗಳು ಮತ್ತು ಭತ್ತದಲ್ಲೂ ಇಳುವರಿ ಚೆನ್ನಾಗಿದೆ. ಹತ್ತಿ ಬೆಳೆಯ ಕಟಾವಿನ ಯಾಂತ್ರೀಕರಣ ಹಾಗೂ ಜೈವಿಕ ಅನಿಲ ಉತ್ಪಾದನಾ ರಂಗಗಳಿಂದ ಭಾರತ ಈಜಿಪ್ಟ್‌ನಿಂದ ಲಾಭ ಪಡೆಯಬಹುದು. ತಾಳೆ, ದಾಳಿಂಬೆ, ಮಾವು, ನಿಂಬೆ ಜಾತಿಯ ಹಣ್ಣುಗಳು ಹಾಗೂ ಬಾಳೆಹಣ್ಣು ಈ ರಂಗಗಳಲ್ಲೂ ಸಾಕಷ್ಟು ಸಹಕಾರಕ್ಕೆ ಅವಕಾಶಗಳಿವೆ. ಈಜಿಪ್ಟ್ ಭಾರತದಿಂದ ಎಮ್ಮೆಗಳ ತಳಿ ಸುಧಾರಣೆ, ಜೈವಿಕ ತಂತ್ರಜ್ಞಾನ ಹಾಗೂ ತಳಿಗಳ ಸುಧಾರಣೆ ಮತ್ತು ಸಣ್ಣ ಕೃಷಿಉಪಕರಣಗಳ ಅಭಿವೃದ್ಧಿ ರಂಗಗಳಿಂದ ಲಾಭ ಪಡೆಯಬಹುದಾಗಿದೆ.

ಈ ಬಗ್ಗೆ ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನ ಮಹಾನಿರ್ದೇಶಕರಾದ ಡಾ. ಆರ್.ಎಸ್. ಪರೋಡ ಅವರು ಈಜಿಪ್ಟ್‌ನೊಂದಿಗೆ ಸಹಕಾರ ಒಪ್ಪಂದಕ್ಕೆ ಸಹಿ ಹಾಕಿದ್ದಾರೆ.

### ಭತ್ತದ ಬಗ್ಗೆ ಇಂಟರ್‌ನೆಟ್ ಮೂಲಕ ಮಾಹಿತಿ ಲಭ್ಯ

ಭತ್ತದ ಬಗ್ಗೆ ನೀವು ಮನೆಯಲ್ಲೇ ಕುಳಿತು ವಿಶ್ವದ ಯಾವ ಮೂಲೆಯಲ್ಲಿ ಬೆಳೆಯುವ ಭತ್ತದ ಬಗ್ಗೆ ಎಂಥ ಮಾಹಿತಿಯನ್ನು ಬೇಕಾದರೂ ನಿಮ್ಮ ಮನೆಯ ಕಂಪ್ಯೂಟರ್ ಗುಂಡಿಯೊತ್ತಿ ಪಡೆಯಬಹುದು. ಅಂತರರಾಷ್ಟ್ರೀಯ ಭತ್ತ ಸಂಶೋಧನಾ ಸಂಸ್ಥೆಯ ಗ್ರಂಥಾಲಯವು ಸಿದ್ಧಪಡಿಸಿರುವ ಈ ಕಂಪ್ಯೂಟರ್ ಕಾರ್ಯಕ್ರಮ ವಿಶ್ವಾದ್ಯಂತ ಇತರ ಗ್ರಂಥಾಲಯಗಳೊಂದಿಗೆ ಸಂಬಂಧ ಕಲ್ಪಿಸಿದೆ. ಎಚ್‌ಟಿಟಿಟಿಪಿ: ಐಆರ್‌ಆರ್‌ಐ ೫ : ರೈಸ್ ವೆಬ್‌ಗೆ ನೀವು ಸಂಪರ್ಕ ಕಲ್ಪಿಸಿದರೆ ಸಾಕು, ಭತ್ತದ ಬೆಳೆಯ ಬಗ್ಗೆ ನೀವು ದಂಗುಬಡಿಯುವಂಥ ಮಾಹಿತಿಯ ರಾಶಿಯೇ ನಿಮ್ಮ ಕಣ್ಮುಂದೆ ಬರುತ್ತದೆ. "ಫೀಡಿಂಗ್ ದಿ ವರ್ಲ್ಡ್" ವಿಭಾಗದಲ್ಲಿ ನೀವು ವಿಶ್ವಾದ್ಯಂತ ಎಲ್ಲೆಲ್ಲಿ ಎಂಥೆಂಥ ಭತ್ತ ಬೆಳೆಯಲಾಗುತ್ತದೆ, ಅಕ್ಕಿಯನ್ನು ಯಾವ ಯಾವುದಕ್ಕೆ ಬಳಸಲಾಗುತ್ತದೆ ಎಂದು ತಿಳಿಯುತ್ತದೆ.

ಅಮೆರಿಕನ್ ಕಾಡು ಭತ್ತ ಅದು ಹೇಗೆ ಭತ್ತವೇ ಅಲ್ಲ ಎಂಬುದು ನಿಮಗೆ ತಿಳಿಯುತ್ತದೆ. ಇಂಟರ್‌ನೆಟ್ ಮೂಲಕ ಜಪಾನ್‌ನಲ್ಲಿ ಭತ್ತವನ್ನು ಹೇಗೆ ಬೆಳೆಯುತ್ತಾರೆಂಬುದನ್ನು ತಿಳಿಯಬಹುದು. 'ಭತ್ತದ ಉತ್ಪಾದನೆ ಮತ್ತು ವಾಣಿಜ್ಯ' ವಿಭಾಗದಲ್ಲಿ ಭತ್ತ ಬೆಳೆಯುವ ಪ್ರಮುಖ ದೇಶಗಳ ಭತ್ತದ ಉತ್ಪಾದನೆಯ ವಿವರಗಳು ತಿಳಿಯುತ್ತವೆ. ಭತ್ತದ ಬೆಳೆಯನ್ನು ಬೆಳೆಯಲು ಎಂಥ ಭೂಮಿಬೇಕು, ಇದು ಹೇಗೆ ಬೆಳೆಯುತ್ತದೆ, ಈ ಬೆಳೆಗೆ ಬೀಳುವ ಕ್ರಿಮಿ-ಕೀಟಗಳು, ಅವುಗಳ ನಿಯಂತ್ರಣ, ರೋಗ ರುಜಿನಗಳು ಮತ್ತು ಅವುಗಳ ನಿಯಂತ್ರಣ ಮುಂತಾದ ನಿಮ್ಮ ಎಲ್ಲ ಪ್ರಶ್ನೆಗಳಿಗೂ ಉತ್ತರ ಲಭ್ಯವಾಗುತ್ತದೆ. ಭತ್ತದ ಬೆಳೆಗೆ ಸಂಬಂಧಿಸಿದ ಪದಗಳು, ಪಡೆನುಡಿಗಳು, ನುಡಿಗಟ್ಟುಗಳು, ಪರ್ಯಾಯವಾಚಿ ಪದಗಳು ಮುಂತಾದ ಭತ್ತದ ಬಗೆಗಿನ ಸಾಹಿತ್ಯವೇ ನಿಮ್ಮ ಕಣ್ಮುಂದೆ ಪ್ರತ್ಯಕ್ಷವಾಗುತ್ತದೆ.

ಸದ್ಯದಲ್ಲಿ ಈ ಕೇಂದ್ರ ನಾಸಿಕದಲ್ಲಿದೆ. ಇದನ್ನು ಪುಣೆಗೆ ವರ್ಗಾಯಿಸಲಾಗುವುದು. ಇದು ರೋಗನಿರೋಧಕ ಸಂಕರ ತಳಿಗಳನ್ನು ರೂಪಿಸುವುದು, ನಿರ್ಜಲೀಕರಣ ಮಾಡಿ ರಫ್ತು ಮಾಡಲು ಯೋಗ್ಯ ತಳಿಗಳನ್ನು ರೂಪಿಸುವುದು, ಹಳೆ ಈರುಳ್ಳಿ ತಳಿಗಳನ್ನು ರೂಪಿಸುವುದು (ರಫ್ತಿಗಾಗಿ) ನೇರ ನಾಟಿ ಮಾಡಲು ತಂತ್ರಜ್ಞಾನ ರೂಪಿಸುವುದು, ಕೃಷಿ ಸಲಕರಣೆಗಳನ್ನು ರೂಪಿಸುವುದು, ಕೊಯಿಲಿನ ಬಳಿಕದ ತಂತ್ರಜ್ಞಾನ ರೂಪಿಸುವುದು, ಕ್ರಿಮಿನಾಶಕಗಳ ಅವಲಂಬನೆಯನ್ನು ಕಡಿಮೆ ಮಾಡುವಂಥ ಕೃಷಿ ತಂತ್ರಜ್ಞಾನ ರೂಪಿಸುವುದು, ಅತ್ಯಂತ ಕಡಿಮೆ ಅವಧಿಯಲ್ಲಿ ಕೊಯಿಲಿಗೆ ಬರುವಂತ ತಳಿಗಳನ್ನು ರೂಪಿಸುವುದು ಈ ಮುಂತಾದ ಕಾರ್ಯಗಳತ್ತ ನಿಗಾ ವಹಿಸುವುದು.

(ಐ.ಸಿ.ಎ.ಆರ್.)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಕಳೆದ ಸಂಚಿಕೆಯಿಂದ)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 126. | ಶ್ರೀ ಸಿದ್ಧಲಿಂಗಯ್ಯ ಬಿನ್ ಮುದ್ದವೀರಪ್ಪ,<br>ಗುಬ್ಬಿ ಹೊಸಹಳ್ಳಿ, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | 1001-00 |
| 127. | ಶ್ರೀ ಬಿ.ಪಿ. ಮಲ್ಲಣ್ಣ<br>ಕೊಲ್ಲಹಳ್ಳಿ ಎಸ್ಟೇಟ್, ಮಟಸಾಗರ ಅಂಚೆ,<br>ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | 1000-00 |
| 128. | ಶ್ರೀ ಟಿ. ಚನ್ನಬಸವಯ್ಯ<br>ತಾಳಗುಂದ ಅಂಚೆ, ಕಳ್ಳಂಬೆಳ್ಳ ಉಪ ಅಂಚೆ,<br>ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | 1001-00 |
| 129. | ಶ್ರೀ ಬಿ.ಎಂ. ಗೌರಪ್ಪ<br>ನಿವೃತ್ತ ಡೆಪ್ಯೂಟಿ ಮ್ಯಾನೇಜರ್,<br>ಭಾರತ್ ಎಲೆಕ್ಟ್ರಾನಿಕ್ಸ್ ಲಿಮಿಟೆಡ್,<br>ನಂ.16, 1ನೇ ಬ್ಲಾಕ್, 1ನ ಮೇನ್,<br>ಬಿ.ಇ.ಎಲ್. ಬಡಾವಣೆ, ವಿದ್ಯಾರಣ್ಯಪುರ,<br>ಬೆಂಗಳೂರು - 570 092. | 1001-00 |
| 130. | ಶ್ರೀ ಎನ್.ಎಸ್. ನಾರಾಯಣಪ್ಪ,<br>ನಿವೃತ್ತ ಲೆಕ್ಕಾಧಿಕಾರಿಗಳು,<br>ಕೆ.ಇ.ಬಿ. ನಳಂದಶಾಲಾ ರಸ್ತೆ,<br>ರಾಘವೇಂದ್ರನಗರ, ಬೆಂಗಳೂರು-560102. | 1001-00 |
| 131. | ಶ್ರೀ ಡಿ. ರೇವಣ್ಣಸಿದ್ಧಪ್ಪ<br>ಕಂಟ್ರಾಕ್ಟರ್,960, 4ನೇ ಬ್ಲಾಕ್,<br>2ನೇ ಮುಖ್ಯರಸ್ತೆ, ರಾಜಾಜಿನಗರ,<br>ಬೆಂಗಳೂರು-560010.. | 4500-00 |
| 132. | ಶ್ರೀ ಎಂ.ಹೆಚ್. ಸಿದ್ಧನಂಜಯ್ಯ<br>ಬಿನ್ ಚಿಕ್ಕಮಲ್ಲಪ್ಪ, ಹೊನ್ನೇನಹಳ್ಳಿ,<br>ತುಮಕೂರು ಕಸಬಾ, ಸಿರಾ ಗೇಟ್ ಅಂಚೆ,<br>ತುಮಕೂರು ತಾಲ್ಲೂಕು - 570 006. | 1001-00 |
| 133. | ಶ್ರೀಮತಿ ಸುನಿತಾ ಸದಾಶಿವನ್,<br>ಕೇರಾಫ್ ಶ್ರೀರಾಸದನ್, ನಂ.1,<br>12ನೇ ಮೇನ್, ವಸಂತನಗರ,<br>ಬೆಂಗಳೂರು - 560 052 | 1001-00 |
| 134. | ಶ್ರೀ ಕೆ. ವೀರಭದ್ರಯ್ಯ<br>ಬಿನ್ ಕೆಂಪಯ್ಯ ಚಿನ್ನಮ್ಮ<br>ಕಂಕರಪಾಳ್ಯ,<br>ಮಾಗಡಿ ತಾಲ್ಲೂಕು - 561 101. | 1001-00 |
| 135. | ಶ್ರೀ ಹೆಚ್. ಸದಾಶಿವಯ್ಯ,<br>ನಂ. 1439, ಐಬೂರು ಬಡಾವಣೆ,<br>ರಾಮನಗರಂ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1101-00 |
| 136. | ಶ್ರೀ ಎ.ಎಂ. ಮುರುಗೇಶಿ<br>ಶ್ರೀ ವಿನಾಯಕ ಕೃಪ, ರಾಜಣ್ಣ ಕಾಲೋನಿ,<br>ನಾಗರಪಾಳ್ಯ, ಸಿ.ವಿ. ರಾಮನ್‌ನಗರ,<br>ಬೆಂಗಳೂರು - 560 093. | 1002-00 |
| 137. | ಶ್ರೀ ಎಂ. ನಂಜುಂಡಪ್ಪ<br>ಅಧ್ಯಾಪಕರು, ಕುರಡಿ - 561 210,<br>ಗೌರಿಬಿದನೂರು ತಾಲ್ಲೂಕು,<br>ಕೋಲಾರ ಜಿಲ್ಲೆ. | 1001-00 |
| 138. | ಶ್ರೀ ಎನ್. ರೇಣುಕಾರಾಧ್ಯ,<br>ಹಿಂದಿ ಪಂಡಿತರು, ಹಿರೇಹಳ್ಳಿ,<br>ತುಮಕೂರು ತಾಲ್ಲೂಕು. | 1001-00 |
| 139. | ಶ್ರೀಮತಿ ಎನ್. ಗಿರಿಜಮ್ಮ<br>ಕೋಂ. ಎನ್. ರೇಣುಕಾರಾಧ್ಯ,<br>ಹಿರೇಹಳ್ಳಿ, ತುಮಕೂರು ತಾಲ್ಲೂಕು. | 1001-00 |
| 140. | ಶ್ರೀ ಹೆಚ್.ಎಸ್. ಬಸವರಾಜು<br>ಬಿನ್ ಲೇಟ್ ಶಿವರುದ್ರಯ್ಯ<br>ನಿವೃತ್ತ ಮುಖ್ಯ ಶಿಕ್ಷಕರು, ಅಂಚೆ ಹರಳೂರು,<br>ತುಮಕೂರು ತಾಲ್ಲೂಕು. | 1500-00 |
| 141. | ಶ್ರೀ ಹೆಚ್.ಎಸ್. ಸೋಮಶೇಖರಯ್ಯ ಮತ್ತು<br>ಸಹೋದರರು, ಅಡಿಕೆ ವ್ಯಾಪಾರಿಗಳು,<br>ಮೈಸೂರು ಬ್ಯಾಂಕ್ ರಸ್ತೆ,<br>ಹೊಸಕೋಟೆ - 562 113,<br>ಬೆಂಗಳೂರು ಗ್ರಾ. ಜಿಲ್ಲೆ. | 1001-00 |

(ಮುಂದುವರಿಯುತ್ತದೆ)

## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 64. | ಶ್ರೀಮತಿ ಮಾಲಗೊಂಡನಹಳ್ಳಿ ಪಾರ್ವತಮ್ಮ ಎಂ.ಬಿ. ಶಿವಣ್ಣ - ಮಲ್ಲಿಕಾರ್ಜುನಸ್ವಾಮಿ, ಸಂಗಮೇಶ್ವರ ಟ್ರೇಡರ್ಸ್, ನಂ. 750, ಗೋವಿನಪುರ ಬಡಾವಣೆ, ಪಂಪ್ ಹೌಸ್ ರೋಡ್, ತಿಪಟೂರು, ತುಮಕೂರು ತಾಲ್ಲೂಕು. | 1,101-00 |
| 65. | ಶ್ರೀಮತಿ ಕಮಲಮ್ಮ ಮತ್ತು ಸಹೋದರರು, ಬಲಮುರಿ ಗಣಪತಿ ದೇವಸ್ಥಾನದ ಬಳಿ, ಸಿದ್ಧಗಂಗಾ ಬಡಾವಣೆ, ತುಮಕೂರು. | 5,000-00 |
| 66. | ಶ್ರೀ ಎಂ.ಎಸ್. ಗುರುಸಿದ್ಧಯ್ಯ ತಂದೆ ಸಿದ್ಧರಾಮಯ್ಯ, ಮರಸೆಟ್ಟಿಹಳ್ಳಿ, ಸಂಪಿಗೆ ಅಂಚೆ, ಗುಬ್ಬಿ ತಾಲ್ಲೂಕು. ತುಮಕೂರು ಜಿಲ್ಲೆ. | 1,101-00 |
| 67. | ಶ್ರೀ ಎಂ. ರೇವಣ್ಣ ತಂದೆ ಚನ್ನಬಸವಯ್ಯ, ಪ್ರಭುವನಹಳ್ಳಿ ಅಂಚೆ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | 1,001-00 |
| 58. | ಶ್ರೀ ಸಿ.ಬಿ. ರಾಜಶೇಖರಯ್ಯ, ನಿವೃತ್ತ ಶಿಕ್ಷಕರು, ನಂ. 252, 1ನೇ ಕ್ರಾಸ್, ನೆಹರು ನಗರ, ಸರಕಾರಿ ಮಹಿಳೆಯರ ಕಾಲೇಜ್ ಹಿಂದೆ, ಮಂಡ್ಯ. | 1,101-00 |
| 69. | ಶ್ರೀ ಕೆ.ಆರ್. ವಿರೂಪಾಕ್ಷಯ್ಯ, ನಂ. 1173/ಎ, 1ನೇ ಕ್ರಾಸ್, 1ನೇ ಮೇನ್, ಬನಶಂಕರಿ 3ನೇ ಹಂತ, ಹೊಸಕೆರೆಹಳ್ಳಿ ಬಡಾವಣೆ, ಬೆಂಗಳೂರು-65 | 1,201-00 |
| 70. | ಶ್ರೀ ಎನ್. ಎಸ್. ರವಿಶಂಕರ್ ನಳಿನಿ, ತಂದೆ ಸಾಸಲು ಪುಟ್ಟಸಿದ್ದಮ್ಮ ನಂಜುಂಡಪ್ಪ, ನಂ. 251, 3ನೇ ಮುಖ್ಯರಸ್ತೆ, ಕೆ.ಆರ್. ಬಡಾವಣೆ, ತಿಪಟೂರು. | 1,101-00 |
| 71. | ಶ್ರೀ ಎನ್.ಎಸ್. ನಾರಾಯಣಪ್ಪ, ನಿವೃತ್ತ ಲೆಕ್ಕಾಧಿಕಾರಿ, ಕೆ.ಇ.ಬಿ. ನಲಂದಾ ಶಾಲೆ ರಸ್ತೆ, ರಾಘವೇಂದ್ರನಗರ, ತುಮಕೂರು-2 | 1,101-00 |
| 72. | ಶ್ರೀ ಎಲ್.ಎನ್. ಶಿವಣ್ಣ ನಂ. 182, 7ನೇ ಬಿ ಮೇನ್, ಆರ್.ಪಿ.ಸಿ. ಬಡಾವಣೆ, ವಿಜಯನಗರ 2ನೇ ಹಂತ, ಬೆಂಗಳೂರು-40 | 1,101-00 |
| 73. | ಶ್ರೀಮತಿ ಎನ್. ಶಿವಮ್ಮ ನಂ. 182, 7ನೇ ಬಿ ಮೇನ್, ಆರ್.ಪಿ.ಸಿ. ಬಡಾವಣೆ, ವಿಜಯನಗರ 2ನೇ ಹಂತ, ಬೆಂಗಳೂರು-40 | 1,101-00 |
| 74. | ಶ್ರೀಮತಿ ಐ.ವಿ. ಸರಸ್ವತಿ ಮತ್ತು ಮಕ್ಕಳು, ಕೋಂ. ಐ.ಎಂ. ವಿಶ್ವನಾಥ್, ಕಾಫಿ ಬೆಳೆಗಾರರು, ಐಗೂರು ಎಸ್ಟೇಟ್, ಐಗೂರು ಪೋಸ್ಟ್, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | 1,101-00 |

(ಮುಂದುವರೆಯುವುದು)

ಸಜ್ಜನವೆ ಮಜ್ಜನ, ಸದಾಚಾರವೆ ಧೂಪಾರತಿ
ಆಗಮವೆ ಪೂಜೆಯಾಗಿ, ಅಂಗವಿರಹಿತವಾದಲ್ಲಿ
ಉದಯಾಸ್ತಮಾನವಿಲ್ಲದ ಲಿಂಗಾರ್ಚನೆ
ಮಹಾಘನ ಸೋಮೇಶ್ವರಾ ನಿಮ್ಮ ಶರಣರಿಗೆ
-- ಅಜಗಣ್ಣ

ಕಾಯದ ಹಂಗ ಹರಿದು ಕಲ್ಪಿತದ ಗುಣವ ನಷ್ಟವಮಾಡಿ
ಮನವಿಲ್ಲದೆ ಆ ಮನಕ್ಕೆ ವಿವೇಕತೃಪ್ತಿಯನರಿಯಲು
ವಿಶಿಷ್ಟದನುಜ್ಞೆಯಾಯಿತ್ತಯ್ಯ
ಸಂಗಯ್ಯನಲ್ಲಿ ಬಸವನಡಗಲು ಎನ್ನ ಕಾಯವೆ
ತೃಣರೂಪವಯ್ಯ.
-- ನೀಲಮ್ಮ

*ಹಾರ್ದಿಕ ಶುಭಾಶಯಗಳೊಂದಿಗೆ*

(ಸ್ಥಾಪನೆ : 1982)

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಶ್ರೀ ಎಸ್. ವಿಶ್ವನಾಥಯ್ಯ
ಉಪಾಧ್ಯಕ್ಷರು

---

ಸ್ಥಾಪನೆ : 1995

*ಶುಭಾಶಯಗಳೊಂದಿಗೆ*

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ದೂರವಾಣಿ : 77267

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ** (31-1-1998ರಲ್ಲಿದ್ದಂತೆ)

ಸದಸ್ಯರ ಸಂಖ್ಯೆ -2861

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಅಧಿಕೃತ ಷೇರು ಬಂಡವಾಳ | 50.00 | ಠೇವಣಿಗಳು | 719.15 |
| ಪಾವತಿಯಾದ ಷೇರು ಬಂಡವಾಳ | 46.94 | ಚಾಲ್ತಿ ಬಂಡವಾಳ | 776.91 |
| ಕಾಯ್ದಿರಿಸದ ನಿಧಿಗಳು | 10.82 | ಸಾಲಗಳು | 496.63 |

***ನಿಶ್ಚಿತ ಠೇವಣಿಗಳ ಮೇಲೆ ನೀಡುವ ಬಡ್ಡಿ ದರ (9.5.1998 ರಿಂದ)***

| | | | |
|---|---|---|---|
| 30 ದಿವಸದಿಂದ 180 ದಿನಗಳವರೆಗೆ | - 10% | 181ದಿವಸಗಳಿಂದ 1 ವರ್ಷದವರೆಗೆ | - 11% |
| 1 ವರ್ಷದಿಂದ 2 ವರ್ಷಗಳವರೆಗೆ | - 12% | 2 ವರ್ಷದಿಂದ ಮೇಲ್ಪಟ್ಟು | - 13% |
| ಉಳಿತಾಯ ಖಾತೆ | - 5.5% | | |

ಶ್ರೀ ಟಿ. ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ. ಎಸ್. ಶಂಕರಯ್ಯ
ಉಪಾಧ್ಯಕ್ಷರು

ನಟರಾಜು
ವ್ಯವಸ್ಥಾಪಕರು





# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಅಕ್ಕಿಪೇಟೆ, ಬೆಂಗಳೂರು - 560 053. ✆ :2282224, 2871003,

**ಶಾಖೆಗಳು :**

ನಂ. 32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ, ವಿಜಯನಗರ (ಬಸ್ ಸ್ಟಾಪ್ ಹತ್ತಿರ) ಬೆಂಗಳೂರು-560 040. ✆ : 3358017

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 649183

ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145

ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.

❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.

❖ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(30-11-1998ರಲ್ಲಿದ್ದಂತೆ) (ಲಕ್ಷ ರೂ.ಗಳಲ್ಲಿ)*

| | | | | | |
|---|---|---|---|---|---|
| ಷೇರು ಬಂಡವಾಳ | : | 96.37 | ಹೂಡಿಕೆಗಳು | : | 1585.60 |
| ಸಾಲಗಳು ಮತ್ತು ಮುಂಗಡ | : | 1553.18 | ದುಡಿಯುವ ಬಂಡವಾಳ | : | 3370.81 |
| ಠೇವಣಿಗಳು | : | 3105.92 | | | |

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ
ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ. ಜಿ. ಶಿವಕುಮಾರ್
ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಶ್ರೀ ವೈ.ಟಿ. ಮಹಾದೇವಪ್ಪ
ಡಾ. ಮಲ್ಲಿಕಾರ್ಜುನ
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಕೆ.ಆರ್. ರಾಮಯ್ಯ

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ

***Printed at : Geetanjali Printers, Bangalore-54***

